RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ನವೆಂಬರ್ ೨೮, ೨೦೧೩ (ಮಾರ್ಗಶಿರ ೭, ಶಕ ವರ್ಷ ೧೯೩೫)<br>Bangalore, Thursday, November 28, 2013 (Margashira 7, Shaka Varsha 1935) | ಸಂಚಿಕೆ ೪೭<br>Issue 47 |
|---|---|---|



## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ತಾಲ್ಲೂಕು ಕಛೇರಿಗಳನ್ನು ತೆರೆಯಲು ಹಾಗೂ ಪೂರಕ ಹುದ್ದೆಗಳನ್ನು ಸೃಜಿಸಿ ಆಡಳಿತ ವ್ಯವಸ್ಥೆಯನ್ನು ಸಮಗ್ರವಾಗಿ ಪುನರ್ ರಚಿಸುವ ಕುರಿತು.

**ಓದಲಾಗಿದೆ:** ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಪ್ರಸ್ತಾವನೆ ಸಂಖ್ಯೆ:ಹಿಂವಕನಿ/ಸಿಬ್ಬಂದಿ–3:ಸಿಆರ್–50:2013–14, ದಿನಾಂಕ:28–08–2013.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತದಲ್ಲಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯನ್ನು 1977ರಲ್ಲಿ ಸೃಜಿಸಿದ ಸಮಯದಲ್ಲಿ, ಇಲಾಖೆಯ ಆಯವ್ಯಯ ಕೇವಲ ರೂ.5.00 ಕೋಟಿ ಇದ್ದು, ಪ್ರಸ್ತುತ 2013–14ನೇ ಸಾಲಿನಲ್ಲಿ ಇದರ ಗಾತ್ರ ರೂ.1369.00 ಕೋಟಿಗೆ ಏರಿಕೆಯಾಗಿದೆಯೆಂದು, ವಿದ್ಯಾರ್ಥಿ ನಿಲಯಗಳ ಸಂಖ್ಯೆ ಸಹ 450 ರಿಂದ 1981ಕ್ಕೆ ಹೆಚ್ಚಳವಾಗಿದ್ದು. ಇದರ ಪರಿಣಾಮವಾಗಿ ನಿಲಯ ಮೇಲ್ವಿಚಾರಕರ, ಅಡಿಗೆಯವರ, ಅಡಿಗೆ ಸಹಾಯಕರ, ರಾತ್ರಿ ಕಾವಲುಗಾರರ ಸಂಖ್ಯೆ ಸಹ ಬಹಳಷ್ಟು ಏರಿಕೆಯಾಗಿದೆ. ವಿದ್ಯಾರ್ಥಿ ವೇತನ, ಶುಲ್ಕ ಮರುಪಾವತಿ, ತರಬೇತಿ ಕಾರ್ಯಕ್ರಮಗಳು ಜೊತೆಗೆ ಅಲೆಮಾರಿ/ಅರೆಅಲೆಮಾರಿ ಅಭಿವೃದ್ಧಿ ಕಾರ್ಯಕ್ರಮಗಳು, ಸಮುದಾಯ ಭವನಗಳಿಗೆ ಅನುದಾನ ನೀಡಿಕೆ ಇತ್ಯಾದಿ ಅನೇಕ ಹೊಸ ಕಾರ್ಯಕ್ರಮಗಳನ್ನು ಇತ್ತೀಚೆಗೆ ಜಾರಿಗೊಳಿಸಲಾಗುತ್ತಿದೆ ಎಂದು ತಿಳಿಸಿರುತ್ತಾರೆ.

ಈ ಮೇಲಿನ ಕಾರಣಗಳಿಂದಾಗಿ, ರಾಜ್ಯ ಮತ್ತು ಜಿಲ್ಲಾ ಮಟ್ಟದ ಕಛೇರಿಗಳ ಮೇಲೆ ಅತೀ ಹೆಚ್ಚಿನ ಕಾರ್ಯ ಒತ್ತಡ ಉಂಟಾಗುತ್ತಿದ್ದು, ಇದಕ್ಕೆ ಅನುಗುಣವಾಗಿ ಇಲಾಖೆಯಲ್ಲಿನ ಅಧಿಕಾರಿ/ಸಿಬ್ಬಂದಿ ವರ್ಗದವರ ಸಂಖ್ಯೆಯಲ್ಲಿ ಹೆಚ್ಚಳವಾಗಿರುವುದಿಲ್ಲವಾದ್ದರಿಂದ ಮೇಲ್ಕಂಡ ಕಾರ್ಯಕ್ರಮಗಳ ಸಮರ್ಪಕ ಅನುಷ್ಠಾನಕ್ಕೆ ತೊಂದರೆಯಾಗುತ್ತಿರುವುದರಿಂದ, ತಾಲ್ಲೂಕು ಮಟ್ಟದಲ್ಲಿ ಕೇವಲ ಒಬ್ಬ ಗ್ರೂಪ್–ಸಿ ಸಿಬ್ಬಂದಿ ಮಾತ್ರ ಇದ್ದು, ಇಲಾಖೆಯ ಕಾರ್ಯಕ್ರಮಗಳನ್ನು ತಾಲ್ಲೂಕು ಮಟ್ಟದಲ್ಲಿ ಸಮರ್ಪಕವಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆಯಲ್ಲಿ ತಾಲ್ಲೂಕು ಕಛೇರಿಗಳು ಇರುವ ಮಾದರಿಯಲ್ಲಿ ತಾಲ್ಲೂಕು ಮಟ್ಟದಲ್ಲಿ ಪ್ರತಿ ತಾಲ್ಲೂಕಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಒಂದೊಂದು ಕಛೇರಿಯನ್ನು ಪೂರಕ ಸಿಬ್ಬಂದಿಗಳೊಂದಿಗೆ ಸೃಜಿಸಲು ಮತ್ತು ಆಯುಕ್ತರ ಕೇಂದ್ರ ಕಛೇರಿ, ಜಿಲ್ಲಾ ಮಟ್ಟದ ಕಛೇರಿ, ತಾಲ್ಲೂಕು ಕಛೇರಿ, ಇಲಾಖಾ ಸಂಸ್ಥೆಗಳು, ಪರೀಕ್ಷಾ ಪೂರ್ವ ಕೇಂದ್ರಗಳು, ಡಿ.ದೇವರಾಜ ಅರಸು ಸಂಶೋಧನಾ ಸಂಸ್ಥೆ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗ ಇವುಗಳಿಗೆ ಸಂಬಂಧಿಸಿದಂತೆ ಕೆಲವು ಹುದ್ದೆಗಳನ್ನು ಪುನರ್ ಸಂಘಟಿಸುವ ಮೂಲಕ ಆಡಳಿತ ವ್ಯವಸ್ಥೆಯನ್ನು ಸಮಗ್ರವಾಗಿ ಪುನರ್ ರಚಿಸಿ ಆದೇಶ ಹೊರಡಿಸಲು ಪ್ರಸ್ತಾಪಿಸಿರುತ್ತಾರೆ.

ರಾಜ್ಯದ ಶೇಕಡ 60ರಷ್ಟಿರುವ ಹಿಂದುಳಿದ ವರ್ಗಗಳ ಜನಸಮುದಾಯದ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತರ ಕಛೇರಿ, ಜಿಲ್ಲಾ ಕಛೇರಿ, ಮತ್ತು ತಾಲ್ಲೂಕು ಮಟ್ಟದಲ್ಲಿ ಆಡಳಿತ ವ್ಯವಸ್ಥೆಯನ್ನು ಸಮಗ್ರವಾಗಿ ಪುನರ್ ರಚಿಸುವ ಮೂಲಕ ಮತ್ತು ಪೂರಕ ಹುದ್ದೆಗಳನ್ನು ಸೃಜಿಸುವ ಮೂಲಕ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯನ್ನು ಬಲಪಡಿಸಲು ಸರ್ಕಾರವು ಉದ್ದೇಶಿಸಿದ್ದು, ಅದರಂತೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಪ್ರತಿ ತಾಲ್ಲೂಕಿನಲ್ಲಿ ಒಂದು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಕಛೇರಿ ತೆರೆಯಲು ಹಾಗೂ ಅವಶ್ಯವಾಗಿ ಬೇಕಾಗಿರುವ ವಿವಿಧ ಅಧಿಕಾರಿ/ಸಿಬ್ಬಂದಿ ವೃಂದದ ಒಟ್ಟು 2485 ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ಬೆಂಗಳೂರು, ದಿನಾಂಕ:30.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 177 ತಾಲ್ಲೂಕುಗಳಲ್ಲಿ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ ಕಛೇರಿಗಳನ್ನು ಹಾಗೂ ವಿಭಾಗ ಮಟ್ಟದಲ್ಲಿ 04 ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳನ್ನು ತೆರೆಯಲು ಹಾಗೂ ಪೂರಕ ಅಧಿಕಾರಿ/ಸಿಬ್ಬಂದಿಗಳನ್ನು ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಮುಂದುವರೆದು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯನ್ನು ಸದೃಢಗೊಳಿಸಲು ಹಾಗೂ ಇಲಾಖೆಯ ಆಡಳಿತ ವ್ಯವಸ್ಥೆಯನ್ನು ಸುಧಾರಿಸುವ ಹಿತದೃಷ್ಟಿಯಿಂದ ಇಲಾಖೆಯ ಹಾಲಿ ಇರುವ ವಿವಿಧ ಹಂತದ ಕಛೇರಿಗಳಲ್ಲಿ ಅಗತ್ಯವಾಗಿ ಬೇಕಾಗಿರುವ ಅಧಿಕಾರಿ/ಸಿಬ್ಬಂದಿ ವೃಂದದ ಹುದ್ದೆಗಳನ್ನು ಸೃಜಿಸಲು ಸರ್ಕಾರ ಮಂಜೂರಾತಿ ನೀಡಿದೆ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಆಯುಕ್ತರ ಕಛೇರಿ, ಜಿಲ್ಲಾ ಕಛೇರಿಗಳು, ಹೊಸದಾಗಿ ಸ್ಥಾಪಿಸಲಾಗುತ್ತಿರುವ ತಾಲ್ಲೂಕು ಕಛೇರಿಗಳು, ವಿಭಾಗ ಮಟ್ಟದಲ್ಲಿ ಹೊಸದಾಗಿ ಸ್ಥಾಪಿಸಲಾಗುತ್ತಿರುವ ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳಿಗೆ, ಡಿ.ದೇವರಾಜ ಅರಸು ಸಂಶೋಧನಾ ಸಂಸ್ಥೆ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯಗಳಲ್ಲಿನ ಹಾಲಿ ವೃಂದದಲ್ಲಿ ಹೆಚ್ಚುವರಿ ಹುದ್ದೆಗಳನ್ನು ಮತ್ತು ಹೊಸ ವೃಂದದ ಹುದ್ದೆಗಳ ಒಟ್ಟಾರೆ ಸಂಖ್ಯೆಯನ್ನು ಅನುಬಂಧ–I(ಎ)ರಲ್ಲಿ ನೀಡಲಾಗಿದೆ. ಮೇಲ್ಕಂಡ ಕಛೇರಿ/ಸಂಸ್ಥೆಗಳಲ್ಲಿ ಸೃಜಿಸಲಾಗಿರುವ ಹುದ್ದೆಗಳ ವಿವರಗಳನ್ನು ಪ್ರತ್ಯೇಕವಾಗಿ ಅನುಬಂಧ–II(ಎ) ರಿಂದ ಅನುಬಂಧ–II(ಜಿ)ಗಳಲ್ಲಿ ನಮೂದಿಸಿದೆ.

ಕೇಂದ್ರ ಕಛೇರಿಯಲ್ಲಿ ಬೆರಳಚ್ಚುಗಾರರ 05 ಹುದ್ದೆಗಳನ್ನು ಡೇಟಾ ಎಂಟ್ರಿ ಆಪರೇಟರ್ (ಗ್ರೇಡ್–2) ಹೊಸ ವೃಂದದ ಹುದ್ದೆಗಳನ್ನಾಗಿ ಹಾಗೂ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದಲ್ಲಿ 04 ವಾಹನ ಚಾಲಕರ ಹುದ್ದೆಗಳನ್ನು ಡೇಟಾ ಎಂಟ್ರಿ ಆಪರೇಟರ್ (ಗ್ರೇಡ್–2) ಹುದ್ದೆಗಳನ್ನಾಗಿಯೂ ಮತ್ತು 02 ಬೆರಳಚ್ಚುಗಾರರ ಹುದ್ದೆಗಳನ್ನು ದ್ವಿತೀಯ ದರ್ಜೆ ಸಹಾಯಕರ ವೃಂದದ ಹುದ್ದೆಗಳನ್ನಾಗಿ ಪರಿವರ್ತಿಸಿ ಆದೇಶಿಸಿದೆ. ಅಲ್ಲದೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್ ಪೂರ್ವ ಬಾಲಕರು ಹಾಗೂ ಬಾಲಕಿಯರ ವಿದ್ಯಾರ್ಥಿನಿಲಯಗಳಲ್ಲಿನ 278 **ನಿಲಯ ಮೇಲ್ವಿಚಾರಕರು (ಪುರುಷ)** ವೃಂದದ ಹುದ್ದೆಗಳನ್ನು **ಕಿರಿಯ ನಿಲಯ ಪಾಲಕರು (ಪುರುಷ)** ಹೊಸ ವೃಂದದ ಹುದ್ದೆಗಳನ್ನಾಗಿ ಹಾಗೂ **ನಿಲಯ ಮೇಲ್ವಿಚಾರಕರು (ಮಹಿಳೆ)** ವೃಂದದ 176 ಹುದ್ದೆಗಳನ್ನು **ಕಿರಿಯ ನಿಲಯ ಪಾಲಕರು (ಮಹಿಳೆ)** ಹೊಸ ವೃಂದದ ಹುದ್ದೆಗಳಿಗೆ ಉನ್ನತೀಕರಿಸಿ ಆದೇಶಿಸಲಾಗಿದೆ. ಒಟ್ಟಾರೆ ಸಂಖ್ಯೆಯನ್ನು ಅನುಬಂಧ–೫(ಬಿ)ನಲ್ಲಿ ಹಾಗೂ ವಿವರಗಳನ್ನು ಅನುಬಂಧ–II(ಎ), II(ಎಫ್) ಮತ್ತು II(ಜಿ) ಗಳಲ್ಲಿ ನಮೂದಿಸಿದೆ.

ಇದಕ್ಕೆ ತಗಲುವ ವೆಚ್ಚವನ್ನು ಆಯಾ ಸಾಲಿನ ಆಯವ್ಯಯದಲ್ಲಿ "ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ" ಲೆಕ್ಕ ಶೀರ್ಷಿಕೆ 2225–03–277–3–11 ರಾಜ್ಯ ವಲಯ ಯೋಜನೆ, "ನಿರ್ದೇಶನ ಮತ್ತು ಆಡಳಿತ ಲೆಕ್ಕ ಶೀರ್ಷಿಕೆ 2225–03–001–0–01 ರಾಜ್ಯ ವಲಯ ಯೋಜನೇತರ ಮತ್ತು ಜಿಲ್ಲಾ ವಲಯ ಲೆಕ್ಕ ಶೀರ್ಷಿಕೆ 2225–00–103–0–39 "ಕಾರ್ಯಕಾರಿ ಸಿಬ್ಬಂದಿ" ಕಾರ್ಯಕ್ರಮದಡಿ ಯೋಜನೆ ಮತ್ತು ಯೋಜನೇತರ ಬಾಬ್ತುಗಳಲ್ಲಿ ಒದಗಿಸಲಾಗುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 668 ವೆಚ್ಚ–3/13 ದಿನಾಂಕ:16–09–2013 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 29 ಐಎಂಎಂ 2013, ದಿನಾಂಕ:30–09–2013 ರಲ್ಲಿ ನೀಡಿರುವ ಸಹಮತಿಯೊಂದಿಗೆ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಹೆಚ್.ಅನಿಲ್‌ಕುಮಾರ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013ಕ್ಕೆ ಅನುಬಂಧ–I(ಎ)**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಕೇಂದ್ರ ಕಛೇರಿ, ಜಿಲ್ಲಾ ಕಛೇರಿ, ಹೊಸದಾಗಿ ಸ್ಥಾಪಿಸುವ ತಾಲ್ಲೂಕು ಕಛೇರಿ, ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳು, ಡಿ.ದೇವರಾಜ ಅರಸು ಸಂಶೋಧನಾ ಸಂಸ್ಥೆ ಮತ್ತು ವಿದ್ಯಾರ್ಥಿನಿಲಯಗಳಿಗೆ ಹೊಸದಾಗಿ ಸೃಜಿಸಿರುವ ವಿವಿಧ ವೃಂದದ ಒಟ್ಟು ಹುದ್ದೆಗಳು**

| ಕ್ರ ಸಂ | ಹುದ್ದೆಗಳು | ವೇತನ ಶ್ರೇಣಿ | ಮಂಜೂರು ಮಾಡಿದ ಹುದ್ದೆಗಳ ಸಂಖ್ಯೆ |
|---|---|---|---|
| **1** | **2** | **3** | **4** |
| 1 | ಅಪರ ನಿರ್ದೇಶಕರು | 48900–63600 | 2 |
| 2 | ಉಪ ನಿರ್ದೇಶಕರು (ಸಂಗ್ರಹಣೆ) | 36300–53850 | 1 |
| 3 | ಮುಖ್ಯ ಲೆಕ್ಕಾಧಿಕಾರಿ | 36300–53850 | 1 |
| 4 | ಕಾನೂನು ಅಧಿಕಾರಿ | 36300–53850 | 1 |
| 5 | ಸಂಶೋಧನಾ ಅಧಿಕಾರಿ | 36300–53850 | 1 |
| 6 | ಪ್ರಾಂಶುಪಾಲರು | 28100–50100 | 4 |
| 7 | ಸೀನಿಯರ್ ಪ್ರೋಗ್ರಾಮರ್ | 28100–50100 | 1 |
| 8 | ಜೂನಿಯರ್ ಪ್ರೋಗ್ರಾಮರ್ | 22800–43200 | 1 |

| ಕ್ರ ಸಂ | ಹುದ್ದೆಗಳು | ವೇತನ ಶ್ರೇಣಿ | ಮಂಜೂರು ಮಾಡಿದ ಹುದ್ದೆಗಳ ಸಂಖ್ಯೆ |
|---|---|---|---|
| 9 | ಸಹಾಯಕ ನಿರ್ದೇಶಕರು (ಯೋಜನೆ ಮತ್ತು ಸಾಂಖ್ಯಿಕ) | 22800–43200 | 1 |
| 10 | ಸಹಾಯಕ ಸಂಗ್ರಹಣಾಧಿಕಾರಿ | 22800–43200 | 1 |
| 11 | ಗ್ರಂಥ ಪಾಲಕರು/ಕ್ಯೂರೇಟರ್ | 22800–43200 | 1 |
| 12 | ಪತ್ರಾಂಕಿತ ವ್ಯವಸ್ಥಾಪಕರು | 22800–43200 | 33 |
| 13 | ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ | 22800–43200 | 177 |
| 14 | ಲೆಕ್ಕ ಅಧೀಕ್ಷಕರು | 21600–40050 | 31 |
| 15 | ಕಛೇರಿ ಮೇಲ್ವಿಚಾರಕರು | 20000–36300 | 7 |
| 16 | ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ | 20000–36300 | 3 |
| 17 | ಡಯಟೀಷಿಯನ್ | 20000–36300 | 1 |
| 18 | ಕಿರಿಯ ಇಂಜಿನಿಯರ್(ಸಿವಿಲ್) | 17650–32000 | 4 |
| 19 | ಶೀಘ್ರಲಿಪಿಗಾರರು | 14550–26700 | 2 |
| 20 | ಪ್ರಥಮ ದರ್ಜೆ ಸಹಾಯಕರು | 14550–26700 | 217 |
| 21 | ಪ್ರಥಮ ದರ್ಜೆ ಸಹಾಯಕರು (ಲೆಕ್ಕಪತ್ರ) | 14550–26700 | 1 |
| 22 | ಸಾಂಖ್ಯಿಕ ನಿರೀಕ್ಷಕರು | 14550–26700 | 2 |
| 23 | ಸಂಶೋಧನಾ ಸಹಾಯಕರು | 14550–26700 | 1 |
| 24 | ಡೇಟಾ ಎಂಟ್ರಿ ಆಪರೇಟರ್ (ಗ್ರೇಡ್–1) | 14550–26700 | 38 |
| 25 | ಡೇಟಾ ಎಂಟ್ರಿ ಆಪರೇಟರ್ (ಗ್ರೇಡ್–2) | 11600–21000 | 177 |
| 26 | ದ್ವಿತೀಯ ದರ್ಜೆ ಸಹಾಯಕರು | 11600–21000 | 207 |
| 27 | ದ್ವಿತೀಯ ದರ್ಜೆ ಸಹಾಯಕರು (ಲೆಕ್ಕಪತ್ರ) | 11600–21000 | 2 |
| 28 | ರಾತ್ರಿ ಕಾವಲುಗಾರರು | 9600–14550 | 1349 |
| 29 | ಜವಾನರು | 9600–14550 | 218 |
| | **ಒಟ್ಟು** | | **2485** |

**ಟಿಪ್ಪಣಿ: ಮೇಲ್ಕಂಡ ಹುದ್ದೆಗಳ ವಿವರಗಳನ್ನು ಅನುಬಂಧ–II(ಎ) ರಿಂದ ಅನುಬಂಧ–II(ಜಿ) ರವರೆಗೆ ನೀಡಲಾಗಿದೆ.**

**ಅನುಬಂಧ–I (ಬಿ) ಕೇಂದ್ರ ಕಛೇರಿ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಮತ್ತು ಇಲಾಖಾ ವಿದ್ಯಾರ್ಥಿನಿಲಯಗಳಲ್ಲಿ ಪರಿವರ್ತಿಸಲಾದ/ಉನ್ನತೀಕರಿಸಲಾದ ಹುದ್ದೆಗಳು**

| ಕ್ರ ಸಂ | ಯಾವ ಹುದ್ದೆಯಿಂದ | | ಯಾವ ಹುದ್ದೆಗೆ | |
|---|---|---|---|---|
| | **ವೃಂದ ಮತ್ತು ವೇತನ ಶ್ರೇಣಿ ಹಾಗೂ ಕಛೇರಿ/ಸಂಸ್ಥೆ** | **ಹುದ್ದೆಗಳ ಸಂಖ್ಯೆ** | **ಪರಿವರ್ತಿಸಲ್ಪಟ್ಟ ಹುದ್ದೆ ಮತ್ತು ವೇತನ ಶ್ರೇಣಿ** | **ಹುದ್ದೆಗಳ ಸಂಖ್ಯೆ** |
| 1 | **ಕೇಂದ್ರ ಕಛೇರಿ**<br>ಬೆರಳಚ್ಚುಗಾರರು<br>(11600–21000) | (–)05 | **ಕೇಂದ್ರ ಕಛೇರಿ**<br>ಡೇಟಾ ಎಂಟ್ರಿ ಆಪರೇಟರ್ (ಗ್ರೇಡ್–2)<br>11600–21000 | (+)05 |
| 2 | **ಕ.ರಾ.ಹಿಂ.ವ.ಆಯೋಗ**<br>(i)ವಾಹನ ಚಾಲಕರು<br>(11600–21000)<br>(ii)ಬೆರಳಚ್ಚುಗಾರರು (11600–21000) | (–)04<br><br><br>(–)02 | **ಕ.ರಾ.ಹಿಂ.ವ.ಆಯೋಗ**<br>(i)ಡೇಟಾ ಎಂಟ್ರಿ ಆಪರೇಟರ್<br>(ಗ್ರೇಡ್–2) (11600–21000)<br>(ii)ದ್ವಿ.ದ.ಸ. (11600–21000) | (+)04<br><br><br>(+)02 |
| 3 | **ವಿದ್ಯಾರ್ಥಿನಿಲಯಗಳು**<br>(i) ನಿಲಯ ಮೇಲ್ವಿಚಾರಕರು<br>(ಪುರುಷ)<br>(14550–26700)<br>(ii) ನಿಲಯ ಮೇಲ್ವಿಚಾರಕರು<br>(ಮಹಿಳೆ)<br>(14550–26700) | <br>(–) 278<br><br><br>(–176) | **ವಿದ್ಯಾರ್ಥಿನಿಲಯಗಳು**<br>(i) ಕಿರಿಯ ನಿಲಯ ಪಾಲರು<br>(ಪುರುಷ) (ಉನ್ನತೀಕರಿಸಿದ)<br>(17600–32000)<br>(ii) ಕಿರಿಯ ನಿಲಯ ಪಾಲರು<br>(ಮಹಿಳೆ) (ಉನ್ನತೀಕರಿಸಿದ)<br>(17600–32000) | (+)278<br><br><br><br>(+)176 |
| | **ಒಟ್ಟು** | **(–)465** | | **(+)465** |

**ಟಿಪ್ಪಣಿ:**_ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಈ ಮೇಲ್ಕಾಣಿಸಿದ ವಿವಿಧ ಕಛೇರಿಗಳು, ಸಂಸ್ಥೆ, ಆಯೋಗ ಹಾಗೂ ವಿದ್ಯಾರ್ಥಿನಿಲಯಗಳಲ್ಲಿನ ವಿವಿಧ ವೃಂದದ ಹುದ್ದೆಗಳು/ಹುದ್ದೆಗಳ ಪರಿವರ್ತನೆ ಹಾಗೂ ಉನ್ನತೀಕರಿಸಿರುವ ವಿವರಗಳನ್ನು ಅನುಬಂಧ–II(ಎ), II(ಎಫ್) ಹಾಗೂ II(ಜಿ) ಗಳಲ್ಲಿ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013ಕ್ಕೆ ಅನುಬಂಧ–II(ಎ)**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಆಯುಕ್ತಾಲಯದಲ್ಲಿ ಹಾಲಿ ಇರುವ ವೃಂದದಲ್ಲಿ ಹೆಚ್ಚುವರಿ ಹುದ್ದೆಗಳು ಮತ್ತು ಹೊಸ ವೃಂದದ ಹುದ್ದೆಗಳ ಸೃಜನೆ ಹಾಗೂ ವೃಂದ ಪರಿವರ್ತಿಸಿದ ಹುದ್ದೆಗಳು**

| ಕ್ರ. ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಹುದ್ದೆಗಳು | ಹೊಸ ವೃಂದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ವೃಂದ ಪರಿವರ್ತನೆ | ಒಟ್ಟು ವೃಂದ ಬಲ |
|---|---|---|---|---|---|---|
| 1 | ಅಪರ ನಿರ್ದೇಶಕರು (48900–63600) | 0 | 0 | 2 | – | 2 |
| 2 | ಉಪ ನಿರ್ದೇಶಕರು (36300–53850) | 4 | 1 | 0 | – | 5 |
| 3 | ಮುಖ್ಯ ಲೆಕ್ಕಾಧಿಕಾರಿ (36300–53850) | 0 | 0 | 1 | – | 1 |
| 4 | ಕಾನೂನು ಅಧಿಕಾರಿ (36300–53850) | 0 | 0 | 1 | – | 1 |
| 5 | ಸೀನಿಯರ್ ಪ್ರೋಗ್ರಾಮರ್ (28100–50100) | 0 | 0 | 1 | – | 1 |
| 6 | ಪತ್ರಾಂಕಿತ ವ್ಯವಸ್ಥಾಪಕರು ( 22800–43200) | 1 | 3 | 0 | – | 4 |
| 7 | ಜೂನಿಯರ್ ಪ್ರೋಗ್ರಾಮರ್ (22800–43200) | 0 | 0 | 1 | – | 1 |
| 8 | ಸಹಾಯಕ ನಿರ್ದೇಶಕರು (ಯೋಜನೆ ಮತ್ತು ಸಾಂಖ್ಯಿಕ) (22,800–43200) | 0 | 0 | 1 | | 1 |
| 9 | ಸಹಾಯಕ ಸಂಗ್ರಹಣಾಧಿಕಾರಿ (22800–43200) | 0 | 0 | 1 | – | 1 |
| 10 | ಲೆಕ್ಕ ಅಧೀಕ್ಷಕರು (21600–40050) | 2 | 1 | 0 | – | 3 |
| 11 | ಕಛೇರಿ ಮೇಲ್ವಿಚಾರಕರು (20000–36300) | 5 | 3 | 0 | – | 8 |
| 12 | ಡಯಟೀಶಿಯನ್ (20000–36300) | 0 | 0 | 1 | – | 1 |
| 13 | ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ (20000–36300) | 2 | 2 | 0 | – | 4 |
| 14 | ಕಿರಿಯ ಇಂಜಿನಿಯರ್ (ಸಿವಿಲ್) (17650–32000) | 0 | 0 | 4 | – | 4 |
| 15 | ಶೀಘ್ರಲಿಪಿಗಾರರು (14550–26700) | 6 | 2 | 0 | – | 8 |
| 16 | ಪ್ರಥಮ ದರ್ಜೆ ಸಹಾಯಕರು 14550–26700 | 11 | 6 | 0 | – | 17 |
| 17 | ಪ್ರಥಮ ದರ್ಜೆ ಸಹಾಯಕರು (ಲೆಕ್ಕಪತ್ರ) | 2 | 1 | 0 | – | 3 |
| 18 | ಸಾಂಖ್ಯಿಕ ನಿರೀಕ್ಷಕರು (14550–26700) | 0 | 0 | 2 | – | 2 |
| 19 | ಡಾಟಾ ಎಂಟ್ರಿ ಆಪರೇಟರ್ ಗ್ರೇಡ್–1 (14550–26700) | 0 | 0 | 4 | – | 4 |
| 20 | ಡಾಟಾ ಎಂಟ್ರಿ ಆಪರೇಟರ್ ಗ್ರೇಡ್–2 (11600–21000) | 0 | 0 | 0 | (+)5 | 5 |
| 21 | ಬೆರಳಚ್ಚುಗಾರರು (11600–21000) | 10 | 0 | 0 | (–)5 | 5 |
| 22 | ದ್ವಿತೀಯ ದರ್ಜೆ ಸಹಾಯಕರು (ಲೆಕ್ಕಪತ್ರ) (11600–21000) | 0 | 0 | 2 | – | 2 |
| 23 | ಜವಾನರು (9600–14500) | 17 | 3 | 0 | – | 20 |
| 24 | ರಾತ್ರಿ ಕಾವಲುಗಾರರು (9600–14500) | 0 | 0 | 1 | – | 1 |
| | **ಒಟ್ಟು (ಕಾಲಂ 4,5 ಮತ್ತು 6)** | **–** | **22** | **22** | **5** | **–** |

**ಟಿಪ್ಪಣಿ:** (1) ಕ್ರಮ ಸಂಖ್ಯೆ(1) ರಲ್ಲಿ ಸೃಜಿಸಲಾದ ಹೊಸವೃಂದದ 02 ಅಪರ ನಿರ್ದೇಶಕರು ಹುದ್ದೆಗಳಲ್ಲಿ ಒಂದನ್ನು **ಅಪರ ನಿರ್ದೇಶಕರು (ಆಡಳಿತ)** ಮತ್ತೊಂದನ್ನು **ಅಪರ ನಿರ್ದೇಶಕರು (ಅಲೆಮಾರಿ ಕೋಶ)** ಎಂದು ಪದನಾಮೀಕರಿಸಿದೆ.

(2) ಕ್ರಮ ಸಂಖ್ಯೆ(2) ರಲ್ಲಿ ಹೆಚ್ಚುವರಿಯಾಗಿ ಸೃಜಿಸಲಾದ 01 ಉಪ ನಿರ್ದೇಶಕರ ಹುದ್ದೆಯನ್ನು **ಉಪ ನಿರ್ದೇಶಕರು (ಸಂಗ್ರಹಣೆ)** ಎಂದು ಪದನಾಮೀಕರಿಸಿದೆ.

(3) ಕ್ರಮ ಸಂಖ್ಯೆ(3), (10), (17) ಹಾಗೂ (22) ರಲ್ಲಿನ ಹುದ್ದೆಗಳನ್ನು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ; ಕ್ರಮ ಸಂಖ್ಯೆ (8) ಮತ್ತು (18) ರಲ್ಲಿನ ಹುದ್ದೆಗಳನ್ನು ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯಿಂದ; ಹಾಗೂ ಕ್ರಮ ಸಂಖ್ಯೆ (14) ರಲ್ಲಿನ ಹುದ್ದೆಯನ್ನು ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡಬೇಕಾದ ಹುದ್ದೆಗಳಾಗಿರುತ್ತವೆ.

(4) ಕ್ರಮ ಸಂಖ್ಯೆ (21) ರಲ್ಲಿನ ಬೆರಳಚ್ಚುಗಾರರ ಹಾಲಿ ವೃಂದ ಬಲ (ಕೇಂದ್ರ ಕಛೇರಿ) 10 ಹುದ್ದೆಗಳಾಗಿದ್ದು, ಇದರಲ್ಲಿ 05 ಹುದ್ದೆಗಳನ್ನು ಕಡಿಮೆಗೊಳಿಸಿ ಅವುಗಳನ್ನು ಕ್ರಮ ಸಂಖ್ಯೆ (20) ರಲ್ಲಿನ ಡಾಟಾ ಎಂಟ್ರಿ ಆಪರೇಟರ್ (ಗ್ರೇಡ್-2) ಎಂಬ ವೃಂದದ ಹುದ್ದೆಯನ್ನಾಗಿ ಪರಿವರ್ತಿಸಿ ಸೃಜಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013ಕ್ಕೆ ಅನುಬಂಧ- II(ಬಿ)**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಕಛೇರಿಗಳಲ್ಲಿ ಹಾಲಿ ಇರುವ ವೃಂದದಲ್ಲಿ ಹೆಚ್ಚುವರಿ ಹುದ್ದೆಗಳು ಮತ್ತು ಹೊಸ ವೃಂದದಲ್ಲಿ ಸೃಜಿಸಿದ ಹುದ್ದೆಗಳು**

| ಕ್ರ. ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಹುದ್ದೆಗಳು | ಹೊಸ ವೃಂದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ಒಟ್ಟು ವೃಂದ ಬಲ |
|---|---|---|---|---|---|
| 1 | ಪತ್ರಾಂಕಿತ ವ್ಯವಸ್ಥಾಪಕರು (22800-43200) | 0 | 0 | 30 | 30 |
| 2 | ಲೆಕ್ಕ ಅಧೀಕ್ಷಕರು (21600-40050) | 0 | 0 | 30 | 30 |
| 3 | ಪ್ರಥಮ ದರ್ಜೆ ಸಹಾಯಕರು 14550-26700 | 50 | 30 | - | 80 |
| 4 | ದ್ವಿತೀಯ ದರ್ಜೆ ಸಹಾಯಕರು (11600-21000) | 80 | 30 | - | 110 |
| 5 | ಡಾಟಾ ಎಂಟ್ರಿ ಆಪರೇಟರ್ ಗ್ರೇಡ್-1 (14550-26700) | 0 | 0 | 30 | 30 |
| 6 | ಜವಾನರು (9600-14500) | 30 | 30 | - | 60 |
| | **ಒಟ್ಟು (ಕಾಲಂ 4 ಮತ್ತು 5)** | - | **90** | **90** | - |

**ಟಿಪ್ಪಣಿ:** ಕ್ರಮ ಸಂಖ್ಯೆ (2) ರಲ್ಲಿನ ಹುದ್ದೆಗಳನ್ನು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡಬೇಕಾದ ಹುದ್ದೆಗಳಾಗಿರುತ್ತವೆ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013 ಕ್ಕೆ ಅನುಬಂಧ- II(ಸಿ)**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಹೊಸದಾಗಿ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ ಕಛೇರಿಗಳ ಸ್ಥಾಪನೆಗಾಗಿ ಸೃಜಿಸಲಾದ ಹುದ್ದೆಗಳು**

| ಕ್ರ. ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಹುದ್ದೆಗಳು | ಹೊಸ ವೃಂದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ಒಟ್ಟು ವೃಂದ ಬಲ |
|---|---|---|---|---|---|
| 1 | ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ (22800-43200) | 0 | 0 | 177 | 177 |
| 2 | ಕಛೇರಿ ಮೇಲ್ವಿಚಾರಕರು/ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ (20000-36300) | 176 | 1 | - | 177 |
| 3 | ಪ್ರಥಮ ದರ್ಜೆ ಸಹಾಯಕರು 14550-26700 | 0 | 0 | 177 | 177 |
| 4 | ದ್ವಿತೀಯ ದರ್ಜೆ ಸಹಾಯಕರು (11600-21000) | 0 | 0 | 177 | 177 |

| ಕ್ರ. ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಹುದ್ದೆಗಳು | ಹೊಸ ವೃಂದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ಒಟ್ಟು ವೃಂದ ಬಲ |
|---|---|---|---|---|---|
| 5 | ಡಾಟಾ ಎಂಟ್ರಿ ಆಪರೇಟರ್ ಗ್ರೇಡ್–2 (11600–21000) | 0 | 0 | 177 | 177 |
| 6 | ಜವಾನರು (9600–14500) | 0 | 0 | 177 | 177 |
| | **ಒಟ್ಟು (ಕಾಲಂ 5,6 ಮತ್ತು 7)** | **–** | **1** | **885** | **886** |

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013ಕ್ಕೆ ಅನುಬಂಧ– II(ಡಿ)**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ವಿಭಾಗ ಮಟ್ಟದಲ್ಲಿ ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳ ಸ್ಥಾಪನೆಗಾಗಿ ಹೊಸದಾಗಿ ಸೃಜಿಸಲಾಗಿರುವ ಹುದ್ದೆಗಳು**

| ಕ್ರ. ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೊಸ ವೃಂದದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ಒಟ್ಟು ವೃಂದ ಬಲ |
|---|---|---|---|---|
| 1 | ಪ್ರಾಂಶುಪಾಲರು (28100–50100) | – | 4 | 4 |
| 2 | ಕಛೇರಿ ಮೇಲ್ವಿಚಾರಕರು (20000–36300) | – | 4 | 4 |
| 3 | ಪ್ರಥಮ ದರ್ಜೆ ಸಹಾಯಕರು 14550–26700 | – | 4 | 4 |
| 4 | ಡಾಟಾ ಎಂಟ್ರಿ ಆಪರೇಟರ್ ಗ್ರೇಡ್–1 (14550–26700) | – | 4 | 4 |
| 5 | ಜವಾನರು (9600–14500) | – | 8 | 8 |
| | **ಒಟ್ಟು** | – | **24** | **24** |

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013ಕ್ಕೆ ಅನುಬಂಧ– II(ಇ)**

**ಡಿ.ದೇವರಾಜ ಅರಸು ಸಂಶೋಧನಾ ಸಂಸ್ಥೆಗೆ ಹೊಸದಾಗಿ ಸೃಜಿಸಲಾಗಿರುವ ಹುದ್ದೆಗಳು**

| ಕ್ರ. ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೊಸ ವೃಂದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ಒಟ್ಟು ವೃಂದ ಬಲ |
|---|---|---|---|---|
| 1 | ಗ್ರಂಥಪಾಲಕರು/ ಕ್ಯೂರೇಟರ್ (22800–43200) | – | 1 | 1 |
| 2 | ಸಂಶೋಧನಾ ಸಹಾಯಕರು (14550–26700) | – | 1 | 1 |
| | **ಒಟ್ಟು** | **–** | **2** | **2** |

**ಟಿಪ್ಪಣಿ:** ಕ್ರಮ ಸಂಖ್ಯೆ (1) ರಲ್ಲಿನ ಹುದ್ದೆ ಸರ್ಕಾರದ ಗ್ರಂಥಾಲಯ ಇಲಾಖೆಯಿಂದ ಹಾಗೂ ಕ್ರಮ ಸಂಖ್ಯೆ (2) ರಲ್ಲಿನ ಹುದ್ದೆ ವಿಶ್ವವಿದ್ಯಾಲಯದಿಂದ ನಿಯೋಜನೆ ಮೇಲೆ ಭರ್ತಿ ಮಾಡಬೇಕಾದ ಹುದ್ದೆಗಳಾಗಿರುತ್ತವೆ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013 ಕ್ಕೆ ಅನುಬಂಧ– II(ಎಫ್)**

**ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗಕ್ಕೆ ಹೊಸದಾಗಿ ಸೃಜಿಸಲಾಗಿರುವ/ ಪರಿವರ್ತಿಸಿರುವ ಹುದ್ದೆಗಳು**

| ಕ್ರ. ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೊಸ ವೃಂದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ಪರಿವರ್ತಿಸಿರುವ ಹುದ್ದೆಗಳು | ಒಟ್ಟು ವೃಂದ ಬಲ |
|---|---|---|---|---|---|
| 1 | ಸಂಶೋಧನಾ ಅಧಿಕಾರಿ (36300–53850) | – | 1 | – | 1 |
| 2 | ಡಾಟಾ ಎಂಟ್ರಿ ಆಪರೇಟರ್ (ಗ್ರೇಡ್–2) (11600–21000 ) | – | – | (+)4 | 4 |
| 3 | ಬೆರಳಚ್ಚುಗಾರರು (11600–21000) | 2 | – | (–)2 | 0 |

| ಕ್ರ ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೊಸ ವೃಂದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ಪರಿವರ್ತಿಸಿರುವ ಹುದ್ದೆಗಳು | ಒಟ್ಟು ವೃಂದ ಬಲ |
|---|---|---|---|---|---|
| 4 | ದ್ವಿತೀಯ ದರ್ಜೆ ಸಹಾಯಕರು (11600–21000) | 3 | – | (+)2 | 5 |
| 5 | ವಾಹನ ಚಾಲಕರು (11600–21000) | 8 | – | (–)4 | 4 |
| | **ಒಟ್ಟು (ಕಾಲಂ 4 ಮತ್ತು 5)** | – | 1 | 6 | – |

ಟಿಪ್ಪಣಿ: (1) ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದಲ್ಲಿ ಸೃಜಿಸಲಾಗಿರುವ ಸಮೀಕ್ಷಾ ಕೋಶಕ್ಕೆ ಮಂಜೂರಾಗಿರುವ ಸಂಶೋಧನಾಧಿಕಾರಿಗಳ ತಾತ್ಕಾಲಿಕ ಹುದ್ದೆಯನ್ನು ಕ್ರಮ ಸಂಖ್ಯೆ(1) ರಲ್ಲಿ ಖಾಯಂ ಹುದ್ದೆಯನ್ನಾಗಿ ಪರಿಗಣಿಸಿ ಮಂಜೂರಾತಿ ನೀಡಿದೆ. ಈ ಹುದ್ದೆಯನ್ನು ವಿಶ್ವವಿದ್ಯಾಲಯದಿಂದ ನಿಯೋಜನೆ ಮೇಲೆ ಭರ್ತಿ ಮಾಡತಕ್ಕದ್ದು.

(2) ಕ್ರಮ ಸಂಖ್ಯೆ(3) ರಲ್ಲಿ 02 ಬೆರಳಚ್ಚುಗಾರರ ಹುದ್ದೆಗಳನ್ನು ಕ್ರಮ ಸಂಖ್ಯೆ(4)ರಲ್ಲಿ ಕಾಣಿಸಿರುವ ದ್ವಿ.ದ.ಸ ವೃಂದದ ಹುದ್ದೆಗಳನ್ನಾಗಿ ಪರಿವರ್ತಿಸಿದೆ.

(3) ಕ್ರಮ ಸಂಖ್ಯೆ(5) ರಲ್ಲಿ 04 ವಾಹನ ಚಾಲಕರ ಹುದ್ದೆಗಳನ್ನು ಕ್ರಮ ಸಂಖ್ಯೆ(2)ರಲ್ಲಿ ಕಾಣಿಸಿರುವ ಹೊಸ ವೃಂದದ ಹುದ್ದೆಯಾದ ಡಾಟಾ ಎಂಟ್ರಿ ಆಪರೇಟರ್ ಗ್ರೇಡ್–2 ಎಂಬುದಾಗಿ ಪರಿವರ್ತಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013ಕ್ಕೆ ಅನುಬಂಧ– II(ಜಿ)**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ವಿದ್ಯಾರ್ಥಿನಿಲಯಗಳಲ್ಲಿ ಹಾಲಿ ಇರುವ ಗ್ರೂಪ್–ಸಿ ವೃಂದದಲ್ಲಿ ಪರಿವರ್ತಿಸಿದ ಹುದ್ದೆಗಳು**

**ಮತ್ತು ಗ್ರೂಪ್–ಡಿ ವೃಂದದಲ್ಲಿ ಹೆಚ್ಚುವರಿಯಾಗಿ ಸೃಜಿಸಿರುವ ಹುದ್ದೆಗಳು**

| ಕ್ರ ಸಂ | ವೃಂದದ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ಹುದ್ದೆಗಳ ಸಂಖ್ಯೆ | ಹೊಸ ವೃಂದದಲ್ಲಿ ಮಂಜೂರು ಮಾಡಿರುವ ಹುದ್ದೆಗಳು | ಉನ್ನತೀಕರಿಸಿದ ಹುದ್ದೆಗಳು | ಒಟ್ಟು ವೃಂದ ಬಲ |
|---|---|---|---|---|---|
| 1 | ಕಿರಿಯ ನಿಲಯಪಾಲಕರು(ಪುರುಷ) (17600–32000) | 0 | – | +278 From HS(M)* | 278 |
| 2 | ನಿಲಯ ಮೇಲ್ವಿಚಾರಕರು (ಪುರುಷ) (14550–26700) | 1119 | – | (–)278 | 841 |
| 3 | ಕಿರಿಯ ನಿಲಯಪಾಲಕರು (ಮಹಿಳೆ) (17600–32000) | 0 | – | +176 From HS(W)* | 176 |
| 4 | ನಿಲಯ ಮೇಲ್ವಿಚಾರಕರು (ಮಹಿಳೆ) (14550–26700) | 327 | – | (–)176 | 151 |
| 5 | ರಾತ್ರಿ ಕಾವಲುಗಾರರು (9600–14500) | 0 | 1348 | 0 | 1348 |
| | **ಒಟ್ಟು** | **1446** | **1348** | – | **2794** |

1) *HS(M)-Hostel Superintendent (Men)

2) *HS(W)-Hostel Superintendent(Women)

**ಟಿಪ್ಪಣಿ:** (1) ಕ್ರಮ ಸಂಖ್ಯೆ (2)ರಲ್ಲಿನ ನಿಲಯ ಮೇಲ್ವಿಚಾರಕರು (ಪುರುಷ) ವೃಂದದ 278 ಹುದ್ದೆಗಳನ್ನು ಕ್ರಮ ಸಂಖ್ಯೆ (1)ರಲ್ಲಿ ಕಾಣಿಸಿರುವ ಕಿರಿಯ ನಿಲಯಪಾಲಕರು (ಪುರುಷ) ಎಂಬ ಹೊಸ ವೃಂದದ ಹುದ್ದೆಯನ್ನು ಸೃಜಿಸಿ ಉನ್ನತೀಕರಿಸಿದೆ.

(2) ಕ್ರಮ ಸಂಖ್ಯೆ (4)ರಲ್ಲಿನ ನಿಲಯ ಮೇಲ್ವಿಚಾರಕರು (ಮಹಿಳೆ) ವೃಂದದ 176 ಹುದ್ದೆಗಳನ್ನು ಕ್ರಮ ಸಂಖ್ಯೆ (3)ರಲ್ಲಿ ಕಾಣಿಸಿರುವ ಕಿರಿಯನಿಲಯಪಾಲಕರು (ಮಹಿಳೆ) ಎಂಬ ಹೊಸ ವೃಂದದ ಹುದ್ದೆಯನ್ನು ಸೃಜಿಸಿ ಉನ್ನತೀಕರಿಸಿದೆ.

**ಬಿ.ಹೆಚ್.ಅನಿಲ್‌ಕುಮಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR.1074**
**SC-5000**

## ತೋಟಗಾರಿಕೆ ಸಚಿವಾಲಯ

**ವಿಷಯ:** 2013–14ನೇ ಸಾಲಿಗೆ ಭೂ ಸ್ವಾಧೀನ ಮಾಡಿಕೊಳ್ಳುವ ಜಮೀನಿನಲ್ಲಿ ಬೆಳೆದಿರುವ ತೋಟಗಾರಿಕೆ ಬೆಳೆಗಳ ಮಾಲ್ಕಿ ಮೌಲ್ಯ ಮಾಪನದ ದರವನ್ನು ಪರಿಷ್ಕರಿಸುವ ಬಗ್ಗೆ

**ಓದಲಾಗಿದೆ:** 1) ಆದೇಶ ಸಂಖ್ಯೆ:ಕೃತೋಇ 03 ತೋಇವಿ 2008 ದಿ.14–02–2008

2) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: KSHDA/ADH-2/4/2012–13 ದಿ. 2/4–07–2013

**ಸರ್ಕಾರದ ಆದೇಶ ಸಂಖ್ಯೆ:ತೋಇ 160 ತೋಇವಿ 2013 ಬೆಂಗಳೂರು, ದಿನಾಂಕ:13–08–2013**

**ಪ್ರಸ್ತಾವನೆ:–**

ಮೇಲೆ ಕ್ರ.ಸಂ:1ರಲ್ಲಿ ಓದಲಾದ ಆದೇಶದಲ್ಲಿ ವಿವಿಧ ಉದ್ದೇಶಗಳಿಗಾಗಿ ರೈತರ/ ಸರ್ಕಾರ/ ಸರ್ಕಾರೇತರ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವಾಗ ಈ ಜಮೀನಿನಲ್ಲಿ ಬೆಳೆದಿರುವ ತೋಟಗಾರಿಕೆ ಪರಿಹಾರ ನೀಡುವ ಬಗ್ಗೆ ದರ ನಿಗದಿಪಡಿಸಲಾಗಿದೆ. ಮೇಲೆ ಕ್ರ.ಸಂ:2ರಲ್ಲಿ ಓದಲಾದ ಪತ್ರದಲ್ಲಿ ವಿವಿಧ ಉದ್ದೇಶಗಳಿಗಾಗಿ ರೈತರ/ಸರ್ಕಾರೇತರ/ಸರ್ಕಾರದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವಾಗ ಸದರಿ ಜಮೀನಿನಲ್ಲಿ ಇರುವ ತೋಟಗಾರಿಕೆ ಬೆಳೆಗಳಿಗೆ ಸೂಕ್ತವಾದ ಪರಿಹಾರ ನಿಗಧಿ ಪಡಿಸುವ ಸಲುವಾಗಿ ಪ್ರತಿ 5 ವರ್ಷಗಳಿಗೊಮ್ಮೆ ತೋಟಗಾರಿಕೆ ಬೆಳೆಗಳಿಗೆ ತಗಲುವ ವೆಚ್ಚ, ಬರುವ ಆದಾಯ, ಇತ್ಯಾದಿಗಳನ್ನು ಲೆಕ್ಕ ಹಾಕಿ ಮಾಲ್ಕಿ ಮೌಲ್ಯವನ್ನು ಪರಿಷ್ಕರಿಸಲಾಗುತ್ತಿದೆ. ದಿನಾಂಕ:14–02–2008ರ ಆದೇಶದಲ್ಲಿ ತೋಟಗಾರಿಕೆ ಬೆಳೆಗಳ ಮಾಲ್ಕಿ ಮೌಲ್ಯಮಾಪನದ ದರವನ್ನು ಪರಿಷ್ಕರಿಸಲಾಗಿತ್ತು. ಪ್ರಸ್ತುತ ತೋಟಗಾರಿಕೆ ಬೆಳೆಗಳನ್ನು ಬೆಳೆಯಲು ತಗಲುವ ಖರ್ಚು ವೆಚ್ಚ ಹೆಚ್ಚಾಗಿರುವ ಹಿನ್ನೆಲೆಯಲ್ಲಿ ಹಾಗೂ ಈ ದರಗಳು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿರುವ ಪರಿಸ್ಥಿತಿಯನ್ನು ಗಮನಿಸಿ ತೋಟಗಾರಿಕೆ ಬೆಳೆಗಳ ಮಾಲ್ಕಿ ಮೌಲ್ಯದ ದರವನ್ನು ಮುಂದಿನ 2013–14 ಹಾಗೂ 2014–15ನೇ ಸಾಲಿಗೆ ಪರಿಷ್ಕರಿಸಿ ಮಾರ್ಗಸೂಚಿಯೊಂದಿಗೆ ಆದೇಶ ಹೊರಡಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ವಿವಿಧ ಉದ್ದೇಶಗಳಿಗಾಗಿ ರೈತರ/ಸರ್ಕಾರ/ಸರ್ಕಾರೇತರ ಭೂಮಿಯನ್ನು ಸ್ವಾಧೀನ ಮಾಡಿಕೊಳ್ಳುವಾಗ ಜಮೀನಿನಲ್ಲಿ ಬೆಳೆದಿರುವ ತೋಟಗಾರಿಕೆ ಬೆಳೆಗಳ ಮೌಲ್ಯಮಾಪನವನ್ನು ಪರಿಷ್ಕರಿಸಿ 2013–14ನೇ ಸಾಲಿಗೆ ಅನುಬಂಧ–1ರಲ್ಲಿನ ದರದಂತೆ ಬೆಲೆಯನ್ನು ನಿರ್ಧರಿಸಿ ಮೌಲ್ಯ ಮಾಪನ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಿ. ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ.

## ಅನುಬಂಧ–1

## ಕರ್ನಾಟಕ ರಾಜ್ಯದಲ್ಲಿ ತೋಟಗಾರಿಕೆ ಬೆಳೆಗಳಿಗೆ ಮೌಲ್ಯಮಾಪನ ಮಾಡಲು ನಿಬಂಧನೆಗಳು(2013–14 ರಿಂದ 2014–15)

| ಕ್ರ. ಸಂ. Sl. No. | ಬೆಳೆಯ ಹೆಸರು Name of the crop | ಫಸಲು ಬಿಡುವ ಪೂರ್ವಾವಧಿ (ವರ್ಷಗಳಲ್ಲಿ) Length of pre bearing period (years) | ಒಟ್ಟು ಪುನರ್ ಘಟಿಸದ ವೆಚ್ಚ (ಒಂದು ವರ್ಷಕ್ಕೆ) (ರೂ.ಗಳಲ್ಲಿ) Total non-recurring expenditure for one year (Rs.) | ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ ಘಟಿಸುವ ವಾರ್ಷಿಕ ಸರಾಸರಿ ವೆಚ್ಚ (ರೂ.ಗಳಲ್ಲಿ) Average annual recurring expenditure to be incurred during the pre-bearing period (Rs.) | ಮರದ ಮೂಲ ಬೆಲೆ (ರೂ. ಗಳಲ್ಲಿ) Value of one tree (Rs.) | ಆರ್ಥಿಕ ವಾಗಿ ಫಸಲು ಬಿಡುವ ಸರಾಸರಿ ಅವಧಿ (ವರ್ಷಗಳಲ್ಲಿ) Average length of economic bearing period of tree (years) | ಫಸಲು ಬಿಡುವ ಅವಧಿಯಲ್ಲಿಪ್ರತಿ ಮರಕ್ಕೆ ಬೀಳಬಹುದಾದ ಸರಾಸರಿ ವಾರ್ಷಿಕ ವೆಚ್ಚ Average annual cost of cultivation likely to be incurred for one tree of the following categories during the economic period (Rs.) | | | | ಫಸಲು ಬಿಡುವ ಅವಧಿಯಲ್ಲಿ ಪ್ರತಿ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯ Average annual income likely to be obtained from one tree of the following categories during the economic period (Rs.) | | | |
|---|---|---|---|---|---|---|---|---|---|---|---|---|---|---|
| | | | | | | | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV |
| 1 | ಮಾವಿನ ಸಸಿ | 8 | 77.28 | 46.00 | 445.28 | 60 | 110.00 | 82.50 | 55.00 | 27.50 | 1562.50 | 1171.88 | 781.25 | 390.63 |
| 2 | ಮಾವಿನ ಕಸಿ | 4 | 231.84 | 129.38 | 749.34 | 55 | 220.00 | 165.00 | 110.00 | 55.00 | 3125.00 | 2343.75 | 1562.50 | 781.25 |
| 3 | ಸಪೋಟ ಕಸಿ | 4 | 209.76 | 140.88 | 773.26 | 55 | 247.50 | 185.63 | 123.75 | 61.88 | 2031.25 | 1523.44 | 1015.63 | 507.81 |
| 4 | ಸೀಬೆ ಸಸಿ | 4 | 63.48 | 63.25 | 316.48 | 25 | 82.50 | 61.88 | 41.25 | 20.63 | 359.38 | 269.53 | 179.69 | 89.84 |
| 5 | ಸೀಬೆ ಕಸಿ | 3 | 99.36 | 57.50 | 271.86 | 20 | 123.75 | 92.81 | 61.88 | 30.94 | 500.00 | 375.00 | 250.00 | 125.00 |
| 6 | ಹಲಸು ಸಸಿ | 8 | 165.60 | 37.38 | 464.60 | 60 | 110.00 | 82.50 | 55.00 | 27.50 | 1875.00 | 1406.25 | 937.50 | 468.75 |
| 7 | ಹಲಸು ಕಸಿ | 4 | 220.80 | 57.50 | 450.80 | 60 | 137.50 | 103.13 | 68.75 | 34.38 | 2031.25 | 1523.44 | 1015.63 | 506.25 |
| 8 | ದಾಳಿಂಬೆ (ಗೂಟಿ) | 3 | 70.13 | 106.25 | 388.88 | 15 | 152.46 | 114.35 | 76.23 | 38.11 | 469.23 | 351.93 | 234.61 | 117.31 |
| 9 | ಸೀತಾಫಲ ಕಸಿ | 4 | 55.20 | 63.25 | 308.20 | 15 | 33.00 | 24.75 | 16.50 | 8.25 | 218.75 | 164.06 | 109.38 | 54.69 |
| 10 | ರಾಮಫಲ | 4 | 49.68 | 25.88 | 153.18 | 30 | 49.50 | 37.13 | 24.75 | 12.38 | 218.75 | 164.06 | 109.38 | 54.69 |
| 11 | ಚಿರಿಮೋಯ | 4 | 60.72 | 40.25 | 221.72 | 30 | 82.50 | 61.88 | 41.25 | 20.63 | 375.00 | 281.25 | 187.50 | 93.75 |
| 12 | ಅಟಮೋಯ | 4 | 60.72 | 40.25 | 221.72 | 30 | 63.25 | 47.44 | 31.63 | 15.81 | 375.00 | 281.25 | 187.50 | 93.75 |
| 13 | ನಿಂಬೆ ಸಸಿ | 3 | 60.72 | 57.50 | 233.22 | 15 | 165.00 | 123.75 | 82.50 | 41.25 | 406.25 | 304.69 | 203.13 | 101.56 |
| 14 | ನಿಂಬೆ ಬಡೆಡ್ | 3 | 77.28 | 71.88 | 292.91 | 15 | 198.00 | 148.50 | 99.00 | 49.50 | 487.50 | 365.63 | 243.75 | 121.88 |
| 15 | ಸಿಹಿ ನಿಂಬೆ | 3 | 77.28 | 71.88 | 292.91 | 15 | 165.00 | 123.75 | 82.50 | 41.25 | 375.00 | 281.25 | 187.50 | 93.75 |
| 16 | ಗಜನಿಂಬೆ | 3 | 82.80 | 74.75 | 307.05 | 15 | 165.00 | 123.75 | 82.50 | 41.25 | 390.63 | 292.97 | 195.31 | 97.66 |
| 17 | ಕೊಡಗು ಕಿತ್ತಳೆ | 4 | 88.32 | 77.63 | 398.82 | 20 | 176.00 | 132.00 | 88.00 | 44.00 | 468.75 | 351.56 | 234.38 | 117.19 |
| 18 | ಕಿತ್ತಳೆ | 4 | 88.32 | 77.63 | 398.82 | 15 | 176.00 | 132.00 | 88.00 | 44.00 | 468.75 | 351.56 | 234.38 | 117.19 |
| 19 | ಹೇರಳೆ | 4 | 77.28 | 57.50 | 307.28 | 20 | 96.25 | 72.19 | 48.13 | 24.06 | 375.00 | 281.25 | 187.50 | 93.75 |

| ಕ್ರ. ಸಂ. Sl. No. | ಬೆಳೆಯ ಹೆಸರು Name of the crop | ಫಸಲು ಬಿಡುವ ಪೂರ್ವಾವಧಿ (ವರ್ಷಗಳಲ್ಲಿ) Length of pre bearing period (years) | ಒಟ್ಟು ಪುನರ್ ಘಟಿಸದ ವೆಚ್ಚ (ಒಂದು ವರ್ಷಕ್ಕೆ) (ರೂ.ಗಳಲ್ಲಿ) Total non-recurring expenditure for one year (Rs.) | ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ ಘಟಿಸುವ ವಾರ್ಷಿಕ ಸರಾಸರಿ ವೆಚ್ಚ (ರೂ.ಗಳಲ್ಲಿ) Average annual recurring expenditure to be incurred during the pre-bearing period (Rs.) | ಮರದ ಮೂಲ ಬೆಲೆ (ರೂ. ಗಳಲ್ಲಿ) Value of one tree (Rs.) | ಆರ್ಥಿಕ ವಾಗಿ ಫಸಲು ಬಿಡುವ ಸರಾಸರಿ ಅವಧಿ (ವರ್ಷಗಳಲ್ಲಿ) Average length of economic bearing period of tree (years) | ಫಸಲು ಬಿಡುವ ಅವಧಿಯಲ್ಲಿಪ್ರತಿ ಮರಕ್ಕೆ ಬೀಳಬಹುದಾದ ಸರಾಸರಿ ವಾರ್ಷಿಕ ವೆಚ್ಚ Average annual cost of cultivation likely to be incurred for one tree of the following categories during the economic period (Rs.) | | | | ಫಸಲು ಬಿಡುವ ಅವಧಿಯಲ್ಲಿ ಪ್ರತಿ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯ Average annual income likely to be obtained from one tree of the following categories during the economic period (Rs.) | | | |
|---|---|---|---|---|---|---|---|---|---|---|---|---|---|---|
| | | | | | | | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV |
| 20 | ಸಿಟ್ರಾನ್ (ಮಾದಳ) | 3 | 77.28 | 71.88 | 292.91 | 15 | 96.25 | 72.19 | 48.13 | 24.06 | 593.75 | 445.31 | 296.88 | 148.44 |
| 21 | ಚಕ್ಕೋತ | 4 | 88.32 | 77.63 | 398.82 | 20 | 165.00 | 123.75 | 82.50 | 41.25 | 468.75 | 351.56 | 234.38 | 117.19 |
| 22 | ಅಂಜೂರ (ಗೂಟಿ) | 3 | 82.80 | 63.25 | 272.55 | 15 | 55.00 | 41.25 | 27.50 | 13.75 | 162.50 | 121.88 | 81.25 | 40.63 |
| 23 | ನೆಲ್ಲಿ ಸಸಿ | 5 | 27.60 | 20.13 | 128.23 | 50 | 30.25 | 22.69 | 15.13 | 7.56 | 172.63 | 129.50 | 86.31 | 43.13 |
| 24 | ನೆಲ್ಲಿ ಕಸಿ | 3 | 55.20 | 25.88 | 132.83 | 40 | 32.92 | 24.69 | 16.46 | 8.24 | 208.40 | 156.31 | 104.21 | 52.10 |
| 25 | ಹುಣಸೆ ಸಸಿ | 10 | 82.80 | 23.00 | 312.80 | 60 | 82.50 | 61.88 | 41.25 | 20.63 | 3005.86 | 2254.40 | 1502.94 | 751.48 |
| 26 | ಹುಣಸೆ ಕಸಿ | 4 | 96.60 | 46.00 | 280.60 | 50 | 99.00 | 74.25 | 49.50 | 24.75 | 3515.63 | 2636.73 | 1757.81 | 878.91 |
| 27 | ದ್ರಾಕ್ಷಿ | | | | | | | | | | | | | |
| | 1. ಬೆಂಗಳೂರು ನೀಲಿ | 1.5 | 132.48 | 517.50 | 908.73 | 15 | 357.50 | 268.13 | 178.75 | 89.38 | 812.50 | 609.38 | 406.25 | 203.13 |
| | 2. ಬೀಜ ರಹಿತ ತಳಿ | | | | | | | | | | | | | |
| | a.6x4 1815 ಬಳ್ಳಿ | 1.5 | 66.24 | 92.00 | 204.24 | 15 | 88.00 | 66.00 | 44.00 | 22.00 | 350.00 | 262.50 | 175.00 | 87.50 |
| | b.6x6 1210 ಬಳ್ಳಿ | 1.5 | 69.00 | 80.50 | 189.75 | 15 | 105.60 | 79.20 | 52.80 | 26.40 | 390.00 | 292.50 | 195.00 | 97.50 |
| | 3. ಬಿಳಿದ್ರಾಕ್ಷಿ ತಳಿ | | | | | | | | | | | | | |
| | a.11x5 1/2: 720 ಬಳ್ಳಿ | 1.5 | 69.00 | 201.25 | 370.88 | 15 | 145.20 | 122.51 | 72.60 | 36.30 | 405.00 | 341.73 | 202.50 | 101.25 |
| | 4. ಅನಾಬ್–ಇ–ಷಾಹಿ | | | | | | | | | | | | | |
| | b.22x11 180 ಬಳ್ಳಿ | 1.5 | 82.80 | 575.00 | 945.30 | 15 | 440.00 | 330.00 | 220.00 | 110.00 | 1015.63 | 761.72 | 507.81 | 253.91 |
| 28 | ಬೆಣ್ಣೆ ಹಣ್ಣು | 6 | 171.12 | 115.00 | 861.12 | 50 | 96.25 | 72.19 | 48.13 | 24.06 | 450.00 | 337.50 | 225.00 | 112.50 |
| 29 | ಬ್ರೆಡ್ ಫ್ರೂಟ್ | 8 | 146.28 | 28.75 | 376.28 | 50 | 96.25 | 72.19 | 48.13 | 24.06 | 450.00 | 337.50 | 225.00 | 112.50 |
| 30 | ಬೋರೆ ಹಣ್ಣು (ಕಸಿ) | 3 | 82.80 | 51.75 | 238.05 | 25 | 93.50 | 70.13 | 46.75 | 23.38 | 750.00 | 562.50 | 375.00 | 187.50 |
| 31 | ಕಾಡು ಬೋರೆ | 7 | 33.12 | 28.75 | 234.37 | 25 | 22.00 | 16.50 | 11.00 | 5.50 | 218.75 | 164.06 | 109.38 | 54.69 |
| 32 | ಪನ್ನೇರಳೆ | 5 | 82.80 | 48.88 | 327.18 | 40 | 82.50 | 61.88 | 41.25 | 20.63 | 562.50 | 421.88 | 281.25 | 140.63 |

| ಕ್ರ. ಸಂ. Sl. No. | ಬೆಳೆಯ ಹೆಸರು Name of the crop | ಫಸಲು ಬಿಡುವ ಪೂರ್ವಾವಧಿ (ವರ್ಷಗಳಲ್ಲಿ) Length of pre bearing period (years) | ಒಟ್ಟು ಪುನರ್ ಘಟಿಸದ ವೆಚ್ಚ (ಒಂದು ವರ್ಷಕ್ಕೆ) (ರೂ.ಗಳಲ್ಲಿ) Total non-recurring expenditure for one year (Rs.) | ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ ಘಟಿಸುವ ವಾರ್ಷಿಕ ಸರಾಸರಿ ವೆಚ್ಚ (ರೂ.ಗಳಲ್ಲಿ) Average annual recurring expenditure to be incurred during the pre-bearing period (Rs.) | ಮರದ ಮೂಲ ಬೆಲೆ (ರೂ. ಗಳಲ್ಲಿ) Value of one tree (Rs.) | ಆರ್ಥಿಕ ವಾಗಿ ಫಸಲು ಬಿಡುವ ಸರಾಸರಿ ಅವಧಿ (ವರ್ಷಗಳಲ್ಲಿ) Average length of economic bearing period of tree (years) | ಫಸಲು ಬಿಡುವ ಅವಧಿಯಲ್ಲಿಪ್ರತಿ ಮರಕ್ಕೆ ಬೀಳಬಹುದಾದ ಸರಾಸರಿ ವಾರ್ಷಿಕ ವೆಚ್ಚ Average annual cost of cultivation likely to be incurred for one tree of the following categories during the economic period (Rs.) | | | | ಫಸಲು ಬಿಡುವ ಅವಧಿಯಲ್ಲಿ ಪ್ರತಿ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯ Average annual income likely to be obtained from one tree of the following categories during the economic period (Rs.) | | | |
|---|---|---|---|---|---|---|---|---|---|---|---|---|---|---|
| | | | | | | | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV |
| 33 | ಮಲಯನ್ ಆಪಲ್ | 6 | 82.80 | 48.88 | 376.05 | 40 | 82.50 | 61.88 | 41.25 | 20.63 | 562.50 | 421.88 | 281.25 | 140.63 |
| 34 | ಮರಸೇಬು | 8 | 49.68 | 31.63 | 302.68 | 70 | 60.50 | 45.38 | 30.25 | 15.13 | 456.25 | 342.19 | 228.13 | 114.06 |
| 35 | ನೇರಳೆ ಸಸಿ | 8 | 52.44 | 37.38 | 351.44 | 40 | 61.60 | 46.00 | 30.80 | 15.40 | 525.00 | 393.75 | 262.50 | 131.25 |
| 36 | ನೇರಳೆ ಕಸಿ | 4 | 121.44 | 100.63 | 523.94 | 40 | 114.40 | 85.80 | 57.20 | 28.60 | 630.00 | 472.25 | 315.00 | 157.50 |
| 37 | ಖರ್ಜೂರ | 10 | 204.24 | 51.75 | 721.74 | 80 | 77.00 | 57.75 | 38.50 | 19.25 | 375.00 | 281.25 | 187.50 | 93.75 |
| 38 | ಲಿಚ್ಚಿ | 7 | 138.00 | 40.25 | 419.75 | 50 | 77.00 | 57.75 | 38.50 | 19.25 | 750.00 | 562.50 | 375.00 | 187.50 |
| 39 | ಫಾಲ್ಸ | 4 | 24.84 | 8.63 | 59.34 | 20 | 27.50 | 20.63 | 13.75 | 6.88 | 75.00 | 56.25 | 37.50 | 18.75 |
| 40 | ಲಕ್ವಾಟ್ | 8 | 74.52 | 20.13 | 235.52 | 30 | 66.00 | 49.50 | 33.00 | 16.50 | 218.75 | 164.06 | 109.38 | 54.69 |
| 41 | ಕಮರಕ್ | 5 | 57.96 | 25.88 | 187.34 | 30 | 63.25 | 47.44 | 31.63 | 15.81 | 468.75 | 351.56 | 234.38 | 117.19 |
| 42 | ಬಿಳಿಂಬಿ | 4 | 49.68 | 23.00 | 141.68 | 20 | 49.50 | 37.13 | 24.75 | 12.38 | 150.00 | 112.50 | 75.00 | 37.50 |
| 43 | ಕಿರುನೆಲ್ಲಿ | 4 | 24.84 | 17.25 | 93.84 | 20 | 41.25 | 29.56 | 20.63 | 8.94 | 187.50 | 140.63 | 93.75 | 46.88 |
| 44 | ಬಾರ್ಬಡಾಸ್ ಚೆರ್ರಿ | 3 | 24.84 | 20.13 | 85.22 | 20 | 38.50 | 28.88 | 19.25 | 9.63 | 75.00 | 56.25 | 37.50 | 18.75 |
| 45 | ಬ್ರೆಜಿಲಿಯನ್ ಚೆರ್ರಿ | 4 | 24.84 | 23.00 | 116.84 | 20 | 38.50 | 28.88 | 19.25 | 9.63 | 75.00 | 56.25 | 37.50 | 18.75 |
| 46 | ಸಿಂಗಪೂರ್ ಚೆರ್ರಿ | 3 | 24.84 | 17.25 | 76.59 | 15 | 27.50 | 20.63 | 13.75 | 6.88 | 40.63 | 30.47 | 20.31 | 10.16 |
| 47 | ಅಮ್ಟೆ | 7 | 55.20 | 17.25 | 175.95 | 50 | 38.50 | 28.88 | 19.25 | 9.63 | 225.00 | 168.75 | 112.50 | 56.25 |
| 48 | ಮುಳ್ಳು ರಾಮಫಲ | 6 | 55.20 | 40.25 | 296.70 | 30 | 63.25 | 47.44 | 31.63 | 15.81 | 150.00 | 112.50 | 75.00 | 37.50 |
| 49 | ತೆಂಗು | | | | | | | | | | | | | |
| | 1. ಗಿಡ್ಡತಳಿ | 4 | 229.50 | 111.56 | 675.75 | 40 | 180.00 | 135.00 | 90.00 | 45.00 | 1117.19 | 837.90 | 558.59 | 279.30 |
| | 2. ಎತ್ತರ ತಳಿ | 7 | 238.68 | 111.56 | 1019.62 | 60 | 144.00 | 108.00 | 72.00 | 36.00 | 1787.50 | 1340.63 | 893.75 | 558.59 |
| | 3. ಸಂಕರಣ ತಳಿ | 4 | 260.10 | 111.56 | 706.35 | 50 | 158.40 | 118.80 | 79.20 | 39.60 | 2145.00 | 1608.75 | 1072.50 | 536.25 |
| 50 | ಅಡಿಕೆ | 5 | 99.36 | 80.50 | 501.86 | 35 | 170.50 | 127.88 | 85.25 | 42.63 | 546.88 | 410.16 | 273.44 | 136.72 |

| ಕ್ರ. ಸಂ. Sl. No. | ಬೆಳೆಯ ಹೆಸರು Name of the crop | ಫಸಲು ಬಿಡುವ ಪೂರ್ವಾವಧಿ (ವರ್ಷಗಳಲ್ಲಿ) Length of pre bearing period (years) | ಒಟ್ಟು ಪುನರ್ ಘಟಿಸದ ವೆಚ್ಚ (ಒಂದು ವರ್ಷಕ್ಕೆ) (ರೂ.ಗಳಲ್ಲಿ) Total non-recurring expenditure for one year (Rs.) | ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ ಘಟಿಸುವ ವಾರ್ಷಿಕ ಸರಾಸರಿ ವೆಚ್ಚ (ರೂ.ಗಳಲ್ಲಿ) Average annual recurring expenditure to be incurred during the pre-bearing period (Rs.) | ಮರದ ಮೂಲ ಬೆಲೆ (ರೂ. ಗಳಲ್ಲಿ) Value of one tree (Rs.) | ಆರ್ಥಿಕ ವಾಗಿ ಫಸಲು ಬಿಡುವ ಸರಾಸರಿ ಅವಧಿ (ವರ್ಷಗಳಲ್ಲಿ) Average length of economic bearing period of tree (years) | ಫಸಲು ಬಿಡುವ ಅವಧಿಯಲ್ಲಿಪ್ರತಿ ಮರಕ್ಕೆ ಬೀಳಬಹುದಾದ ಸರಾಸರಿ ವಾರ್ಷಿಕ ವೆಚ್ಚ Average annual cost of cultivation likely to be incurred for one tree of the following categories during the economic period (Rs.) | | | | ಫಸಲು ಬಿಡುವ ಅವಧಿಯಲ್ಲಿ ಪ್ರತಿ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯ Average annual income likely to be obtained from one tree of the following categories during the economic period (Rs.) | | | |
|---|---|---|---|---|---|---|---|---|---|---|---|---|---|---|
| | | | | | | | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV |
| 51 | ಕೊಕೋ | 3 | 88.32 | 74.75 | 312.57 | 25 | 159.50 | 119.63 | 79.75 | 39.88 | 546.88 | 410.16 | 273.44 | 136.72 |
| 52 | ಗೋಡಂಬಿ ಸಸಿ | 6 | 77.28 | 46.00 | 353.28 | 50 | 82.50 | 61.88 | 41.25 | 20.63 | 593.75 | 445.31 | 296.88 | 148.44 |
| 53 | ಗೋಡಂಬಿ ಕಸಿ | 4 | 124.20 | 63.25 | 377.20 | 50 | 89.10 | 66.83 | 44.55 | 22.28 | 641.25 | 480.94 | 320.63 | 160.31 |
| 54 | ಏಲಕ್ಕಿ | 2 | 220.80 | 57.50 | 335.80 | 10 | 77.00 | 57.75 | 38.50 | 19.25 | 168.75 | 126.56 | 84.38 | 42.19 |
| 55 | ಕರಿಮೆಣಸು | | | | | | | | | | | | | |
| | 1. ಸ್ಥಳೀಯ ತಳಿ | 3 | 44.16 | 51.75 | 199.41 | 20 | 123.75 | 92.81 | 61.88 | 30.94 | 481.25 | 360.94 | 240.63 | 120.31 |
| | 2. ಸಂಕರಣ ತಳಿ | 3 | 55.20 | 60.38 | 236.33 | 20 | 123.75 | 92.81 | 61.88 | 30.94 | 687.50 | 515.63 | 343.75 | 171.88 |
| 56 | ವಿಳ್ಯೆದೆಲೆ | | | | | | | | | | | | | |
| | 1. 10000 ಗಿಡ/ಎಕರೆ | 2 | 11.04 | 8.63 | 28.29 | 8 | 5.50 | 4.13 | 2.75 | 1.38 | 12.50 | 9.38 | 6.25 | 3.13 |
| | 2. 4000 ಗಿಡ/ಎಕರೆ | 1 | 13.80 | 15.81 | 29.61 | 8 | 8.25 | 6.19 | 4.13 | 2.06 | 25.00 | 18.75 | 12.50 | 6.25 |
| 57 | ವೆನಿಲ್ಲಾ (500 ಗಿಡ/ಎ) | 4 | 46.92 | 80.50 | 368.92 | 12 | 110.00 | 82.50 | 55.00 | 27.50 | 3125.00 | 2343.75 | 1562.50 | 781.25 |
| 58 | ಕಾಫಿ | | | | | | | | | | | | | |
| | 1. ಅರೇಬಿಕ ಕಾಪಿ | 4 | 44.16 | 80.50 | 366.16 | 40 | 33.00 | 24.75 | 16.50 | 8.25 | 43.75 | 32.81 | 21.88 | 10.94 |
| | 2. ರೋಬಸ್ಟಾ ಕಾಫಿ | 4 | 46.92 | 80.50 | 368.92 | 40 | 33.00 | 24.75 | 16.50 | 8.25 | 43.75 | 32.81 | 21.88 | 10.94 |
| 59 | ದಾಲ್ಚಿನ್ನಿ | 6 | 110.40 | 66.13 | 507.15 | 60 | 159.50 | 119.63 | 79.75 | 39.88 | 656.25 | 492.19 | 328.13 | 164.06 |
| 60 | ಜಾಯಿಕಾಯಿ | 8 | 110.40 | 66.13 | 639.40 | 60 | 159.50 | 119.63 | 79.75 | 39.88 | 2062.50 | 1546.88 | 1031.25 | 515.63 |
| 61 | ಸರ್ವ ಸಾಂಬಾರು | 8 | 110.40 | 66.13 | 639.40 | 70 | 159.50 | 119.63 | 79.75 | 39.88 | 2062.50 | 1546.88 | 1031.25 | 515.63 |
| 62 | ಲವಂಗ ಸಸಿ | 8 | 126.96 | 80.50 | 770.96 | 60 | 159.50 | 119.63 | 79.75 | 39.88 | 2250.00 | 1687.50 | 1125.00 | 562.50 |
| 63 | ಲವಂಗ ಕಸಿ | 5 | 143.52 | 92.00 | 603.52 | 60 | 159.50 | 119.63 | 79.75 | 39.88 | 2250.00 | 1687.50 | 1125.00 | 562.50 |

| ಕ್ರ. ಸಂ. Sl. No. | ಬೆಳೆಯ ಹೆಸರು Name of the crop | ಫಸಲು ಬಿಡುವ ಪೂರ್ವಾವಧಿ (ವರ್ಷಗಳಲ್ಲಿ) Length of pre bearing period (years) | ಒಟ್ಟು ಪುನರ್ ಘಟಿಸದ ವೆಚ್ಚ (ಒಂದು ವರ್ಷಕ್ಕೆ) (ರೂ.ಗಳಲ್ಲಿ) Total non-recurring expenditure for one year (Rs.) | ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ ಘಟಿಸುವ ವಾರ್ಷಿಕ ಸರಾಸರಿ ವೆಚ್ಚ (ರೂ.ಗಳಲ್ಲಿ) Average annual recurring expenditure to be incurred during the pre-bearing period (Rs.) | ಮರದ ಮೂಲ ಬೆಲೆ (ರೂ. ಗಳಲ್ಲಿ) Value of one tree (Rs.) | ಆರ್ಥಿಕ ವಾಗಿ ಫಸಲು ಬಿಡುವ ಸರಾಸರಿ ಅವಧಿ (ವರ್ಷಗಳಲ್ಲಿ) Average length of economic bearing period of tree (years) | ಫಸಲು ಬಿಡುವ ಅವಧಿಯಲ್ಲಿಪ್ರತಿ ಮರಕ್ಕೆ ಬೀಳಬಹುದಾದ ಸರಾಸರಿ ವಾರ್ಷಿಕ ವೆಚ್ಚ Average annual cost of cultivation likely to be incurred for one tree of the following categories during the economic period (Rs.) | | | | ಫಸಲು ಬಿಡುವ ಅವಧಿಯಲ್ಲಿ ಪ್ರತಿ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯ Average annual income likely to be obtained from one tree of the following categories during the economic period (Rs.) | | | |
|---|---|---|---|---|---|---|---|---|---|---|---|---|---|---|
| | | | | | | | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV | ವರ್ಗ–I Class-I | ವರ್ಗ–II Class-II | ವರ್ಗ–III Class-III | ವರ್ಗ–IV Class-IV |
| 64 | ಬಾದಾಮಿ(ಕಾಡು ಬಾದಾಮಿ) | 7 | 38.64 | 28.75 | 239.89 | 60 | 33.00 | 24.75 | 16.50 | 8.25 | 150.00 | 112.50 | 75.00 | 37.50 |
| 65 | ಕರ್ಪೂರ | 6 | 71.76 | 28.75 | 244.26 | 60 | 44.00 | 33.00 | 22.00 | 11.00 | 150.00 | 112.50 | 75.00 | 37.50 |
| 66 | ನುಗ್ಗೆ | 2 | 33.12 | 25.88 | 84.87 | 15 | 55.00 | 41.25 | 27.50 | 13.75 | 300.00 | 225.00 | 150.00 | 75.00 |
| 67 | ಕರಿಬೇವು | 2 | 41.40 | 25.88 | 93.15 | 20 | 77.00 | 57.75 | 38.50 | 19.25 | 450.00 | 337.50 | 225.00 | 112.50 |
| 68 | ಬರ್ಸೆರ | 1 | 49.68 | 23.00 | 72.68 | 50 | 19.25 | 14.44 | 9.63 | 4.81 | 112.50 | 84.38 | 56.25 | 28.13 |
| 69 | ಗುಲಾಬಿ | 1 | 124.20 | 40.25 | 164.45 | 6 | 33.00 | 24.75 | 16.50 | 8.25 | 125.00 | 93.75 | 62.50 | 31.25 |
| 70 | ಮಲ್ಲಿಗೆ | | | | | | | | | | | | | |
| | 1. ಗುಂಡು ಮಲ್ಲಿಗೆ, ಕಾಕಡ ಮತ್ತು ಇತರೆ | 1 | 49.68 | 11.50 | 61.18 | 6 | 33.00 | 24.75 | 16.50 | 8.25 | 125.00 | 93.75 | 62.50 | 31.25 |
| | 2.ಬಳ್ಳಿ ಗ್ರಾಂಡಿಪ್ಲೋರಾ, ಜಾಜಿ ಮತ್ತು ಇತರೆ | 1 | 24.84 | 40.25 | 65.09 | 15 | 44.00 | 33.00 | 22.00 | 11.00 | 218.75 | 164.06 | 109.38 | 54.69 |
| 71 | ಕನಕಾಂಬರ | 1 | 6.90 | 4.31 | 11.21 | 4 | 5.50 | 4.13 | 2.75 | 1.38 | 25.00 | 18.75 | 12.50 | 6.25 |
| 72 | ಸಂಪಿಗೆ | 3 | 93.84 | 40.25 | 214.59 | 50 | 71.50 | 53.63 | 35.75 | 17.88 | 1125.00 | 843.75 | 562.50 | 281.25 |
| 73 | ತಾಳೆ | 4 | 298.08 | 241.50 | 1264.08 | 30 | 192.50 | 144.38 | 96.25 | 48.13 | 1593.75 | 1195.31 | 796.88 | 398.44 |

ಬಿ. ವಿ. ರಾಮಲಿಂಗಯ್ಯ
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ.

PR.1072
SC.50

## ತೋಟಗಾರಿಕೆ ಸಚಿವಾಲಯ

**ಸಂಖ್ಯೆ: ತೋಇ 160 ತೋಇವಿ 2013, ಬೆಂಗಳೂರು, ದಿನಾಂಕ:29-8-2013**

**ಸೇರ್ಪಡೆ ಆದೇಶ**

ದಿ:13-8-2013ರ ಇದೇ ಸಮ ಸಂಖ್ಯೆಯ ಆದೇಶದಲ್ಲಿ ವಿವಿಧ ಉದ್ದೇಶಗಳಿಗಾಗಿ ರೈತರ/ಸರ್ಕಾರ / ಸರ್ಕಾರೇತರ ಭೂಮಿಯನ್ನು ಸ್ವಾಧೀನ ಮಾಡಿಕೊಳ್ಳುವಾಗ ಜಮೀನಿನಲ್ಲಿ ಬೆಳೆದಿರುವ ತೋಟಗಾರಿಕೆ ಬೆಳೆಗಳ ಮೌಲ್ಯ ಮಾಪನವನ್ನು ಪರಿಷ್ಕರಿಸಿ ಲಗತ್ತಿಸಿರುವ ಮಾರ್ಗಸೂಚಿಯ ಅನುಬಂಧ-2ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ.

**ಅನುಬಂಧ-2**

**ಕರ್ನಾಟಕ ರಾಜ್ಯದಲ್ಲಿ ತೋಟಗಾರಿಕೆ ಬೆಳೆಗಳಿಗೆ ಮಾಲ್ಕಿ ಮೌಲ್ಯಮಾಪನದ ಪರಿಷ್ಕೃತ ಮಾರ್ಗಸೂಚಿ (2013-14 ರಿಂದ 2014-15ರ ಅವಧಿಗೆ)**

ಸರ್ಕಾರದ ಆದೇಶ ಮತ್ತು ಆಚರಣೆಯಲ್ಲಿರುವಂತೆ ಭೂ ಸ್ವಾಧೀನಪಡಿಸಿಕೊಂಡು ಜಮೀನಿನಲ್ಲಿರುವ ಬೆಳೆಗಳಿಗೆ ತೋಟಗಾರಿಕೆ ಇಲಾಖೆಯ ಅಧಿಕಾರಿಗಳ ಶಿಫಾರಸ್ಸಿನಂತೆ ಭೂ ಸ್ವಾಧೀನ ಕಾಯ್ದೆಯನ್ವಯ ಬೆಲೆ ನಿಗಧಿಪಡಿಸಿ, ಪರಿಹಾರವನ್ನು ಸಂಬಂಧಿಸಿದ ಬೆಳೆಗಾರನಿಗೆ ನೀಡಲಾಗುತ್ತಿದೆ. ಅದರಂತೆ ತೋಟಗಾರಿಕೆ ಇಲಾಖೆಯು ಭೂ ಸ್ವಾಧೀನಪಡಿಸಿಕೊಂಡ ಜಮೀನಿನಲ್ಲಿನ ತೋಟಗಾರಿಕೆ ಬೆಳೆಗಳಿಗೆ ಮಾಲ್ಕಿ ಮೌಲ್ಯಮಾಪನ ಮಾಡಲು ಹಲವಾರು ಪ್ರಯತ್ನಗಳನ್ನು ಮಾಡಿ ಒಂದು ತರ್ಕ ಸಮ್ಮತವಾದ ಮಾರ್ಗಸೂಚಿಯನ್ನು ನಿಗಧಿಪಡಿಸಿರುತ್ತದೆ. ಸಾಮಾನ್ಯವಾಗಿ ಪ್ರತಿ 5 ವರ್ಷಗಳಿಗೊಮ್ಮೆ ಈ ಮಾರ್ಗಸೂಚಿಯನ್ನು ಪರಿಷ್ಕರಿಸಲಾಗುತ್ತಿದ್ದು, ಪ್ರಸ್ತುತ ಆಚರಣೆಯಲ್ಲಿರುವ ಮಾರ್ಗಸೂಚಿಯನ್ನು 2008ರಲ್ಲಿ ಪರಿಷ್ಕರಿಸಲಾಗಿದೆ. ಪ್ರತಿ ವರ್ಷವು ತೋಟಗಾರಿಕೆ ಬೆಳೆಗಳ ನಿರ್ವಹಣೆ ವೆಚ್ಚ ಗಣನೀಯವಾಗಿ ಹೆಚ್ಚುತ್ತಿದ್ದು, ಆದಾಯವು ಅಲ್ಪ ಪ್ರಮಾಣದಲ್ಲಿ ವೃದ್ದಿಸುತ್ತಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ, 2008ರಲ್ಲಿ ಪರಿಷ್ಕರಿಸಲಾಗಿದ್ದ ಮಾರ್ಗಸೂಚಿಯನ್ನು ಮುಂದಿನ 2 ವರ್ಷಗಳ ಅವಧಿಗೆ ಅಂದರೆ 2013-14 ಮತ್ತು 2014-15ನೇ ಸಾಲಿಗೆ ಪರಿಷ್ಕರಿಸಿ ಮಾರ್ಗಸೂಚಿಯನ್ನು ನೀಡಲಾಗಿದೆ.

**ಮೌಲ್ಯಮಾಪನ ಕಾರ್ಯ ವಿಧಾನ:-**

ಮೌಲ್ಯಮಾಪನವು ವೈಜ್ಞಾನಿಕವಾಗಿ ನಿಖರವಾಗಿದ್ದಲ್ಲಿ , ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮೌಲ್ಯಮಾಪನಕ್ಕೆ ಸಂಬಂದಿಸಿದ ಹಲವಾರು ಅಂಶಗಳನ್ನು ಯಾವುದೇ ವಿಳಂಭವಿಲ್ಲದೆ ಸಾಧಿಸಬಹುದಾಗಿರುತ್ತದೆ. ಮರಗಳ ಮೌಲ್ಯಮಾಪನವು ಮುಖ್ಯವಾಗಿ ಆ ಬೆಳೆಗೆ ಫಸಲು ಬಿಡುವ ತನಕ ಮಾಡಿರುವ ವೆಚ್ಚ ಹಾಗೂ ಮರವು ಜೀವಿತ ಅವಧಿಯ ಉಳಿದ ವರ್ಷಗಳಲ್ಲಿ ಬೆಳೆಗಾರನಿಗೆ ಆದಾಯ ನೀಡುವಲ್ಲಿನ ಸಾಮರ್ಥ್ಯದ ಮೇಲೆ ಅವಲಂಬಿತವಾಗಿರುತ್ತದೆ.

ತೋಟಗಾರಿಕೆ ಬೆಳೆಗಳ ಮೌಲ್ಯಮಾಪನದಲ್ಲಿ 2 ಹಂತಗಳಿರುತ್ತವೆ.

1) ಫಸಲು ಬಿಡುವ ಪೂರ್ವಾವಧಿ(Pre bearing stage)
2) ಫಸಲು ನೀಡುವ ಅವಧಿ(Bearing state)

ಈ ಎರಡು ಹಂತಗಳಲ್ಲಿ ಬೆಳೆಗಳ/ಮರಗಳ ಮೌಲ್ಯವನ್ನು ವಿವಿಧ ಸೂತ್ರಗಳನ್ನು ಅಳವಡಿಸಿಕೊಂಡು ಕಂಡು ಹಿಡಿಯಬಹುದಾಗಿರುತ್ತದೆ.

**1.ಫಸಲು ಬಿಡುವ ಪೂರ್ವಾವಧಿ(Pre bearing stage)ಯ ಹಂತದಲ್ಲಿನ ಮೌಲ್ಯಮಾಪನ:**

ಈ ಹಂತದಲ್ಲಿ ತೋಟಗಾರಿಕೆ ಬೆಳೆಯನ್ನು ಬೆಳೆಯುವಾಗ ಸಂಭವಿಸುವ ವೆಚ್ಚವನ್ನು 2 ಭಾಗಗಳಾಗಿ ಈ ಕೆಳಕಂಡಂತೆ ವಿಭಜಿಸಲಾಗಿದೆ.

1. ಪುನರ್ಘಟಿಸದ ವೆಚ್ಚ (Non Recurring Expenditure)
2. ಪುನರ್ಘಟಿಸುವ ವೆಚ್ಚ (Recurring Expenditure)

**1.ಪುನರ್ಘಟಿಸದ ವೆಚ್ಚ** (Non Recurring Expenditure)

ಹೊಸದಾಗಿ ತೋಟ ನಿರ್ಮಾಣ ಮಾಡುವಾಗ ಭೂಮಿ ತಯಾರಿಸುವುದು, ಲೇಔಟ್ ಮಾಡುವುದು, ಗುಂಡಿ ತೆಗೆದು ಮುಚ್ಚುವುದು, ಗಿಡಗಳ ವೆಚ್ಚ (ಸಾಗಾಣಿಕೆ ಸೇರಿದಂತೆ), ಗಿಡ ನೆಡುವುದು ಇತ್ಯಾದಿ ಕಾರ್ಯಗಳನ್ನು ಮಾಡಲು ತಗಲುವ ವೆಚ್ಚವನ್ನು ಪುನರ್ಘಟಿಸದ ವೆಚ್ಚ (Non Recurring Exp enditure) ಎಂದು ಕರೆಯುತ್ತೇವೆ. ಇದು ಬೆಳೆಯಿಂದ ಬೆಳೆಗೆ ಬದಲಾವಣೆಯಾಗುತ್ತದೆ. ಈ ವೆಚ್ಚವನ್ನು ಅನುಬಂಧ-1ರಲ್ಲಿ ಕಾಣಿಸಲಾಗಿದೆ.

**2.ಪುನರ್ಘಟಿಸುವ ವೆಚ್ಚ** (Recurring Expenditure):-

ಇದು ವಾರ್ಷಿಕ ವೆಚ್ಚವಾಗಿದ್ದು, ವಿವಿಧ ಬೇಸಾಯ ಕಾರ್ಯಕ್ರಮಗಳಾದ ಅಂತರಬೇಸಾಯ, ಕಳೆ ತೆಗೆಯುವುದು, ನೀರಾವರಿ, ಗೊಬ್ಬರ ಹಾಕುವುದು, ಸಸ್ಯ ಸಂರಕ್ಷಣೆ ಇತ್ಯಾದಿಗಳಿಗೆ ತಗಲುವ ವೆಚ್ಚವಾಗಿರುತ್ತದೆ. ಪ್ರತಿ ಬೆಳೆಗೆ ತಗಲುವ ವೆಚ್ಚವನ್ನು ಅನುಬಂಧ-1ರಲ್ಲಿ ಕಾಣಿಸಲಾಗಿದೆ.

ಅದರಂತೆ ಫಸಲು ಬಿಡುವ ಪೂರ್ವಾವಧಿಯಲ್ಲಿ ತೋಟಗಾರಿಕೆ ಬೆಳೆಗಳಿಗೆ ಮಾಲ್ಕಿ ಮೌಲ್ಯಮಾಪನ ನಿರ್ಧರಿಸಲು ಈ ಕೆಳಕಂಡ ಸೂತ್ರವನ್ನು ಉಪಯೋಗಿಸಬೇಕು.

ಫಸಲು ಬಿಡುವ ಪೂರ್ವಾವಧಿಯಲ್ಲಿನ ಮರಗಳ ಮಾಲ್ಕಿ ಮೌಲ್ಯ = ಪುನರ್ಘಟಿಸದ+ ವೆಚ್ಚ { ಮರದ ವಯಸ್ಸು x ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ಘಟಿಸುವ ಸರಾಸರಿ ವಾರ್ಷಿಕ ವೆಚ್ಚ }

Valuation of Compensation during Pre-Bearing stage = Non-recurring Expenditure + { Age of the Tree x Average Annual Recurring Expenditure during the pre-bearing stage. }

**2. ಫಸಲು ಬಿಡುವ ಅವಧಿಯಲ್ಲಿ (Bearing stage) ಮೌಲ್ಯಮಾಪನ:–**

ಫಸಲು ಬಿಡುವ ಅವಧಿಯಲ್ಲಿನ ಮರಗಳ ಮೌಲ್ಯಮಾಪನ ಬೆಲೆ ಕಂಡು ಹಿಡಿಯುವುದು ಫಸಲು ಬಿಡುವ ಪೂರ್ವಾವಧಿಯಲ್ಲಿನ ಬೆಲೆಯನ್ನು ಕಂಡು ಹಿಡಿಯುವಷ್ಟು ಸುಲಭವಲ್ಲ. ಏಕೆಂದರೆ ಹಲವಾರು ಅಂಶಗಳು ಈ ಹಂತದಲ್ಲಿ ಅಡಕವಾಗಿದ್ದು ಅವುಗಳನ್ನು ಸಹ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ.

ಅದರಂತೆ, ಫಸಲು ಬಿಡುವ ಅವಧಿಯಲ್ಲಿನ ಮರಗಳ ಮಾಲ್ಕಿ ಮೌಲ್ಯಮಾಪನದ ಒಟ್ಟು ಮೊತ್ತ ಈ ಕೆಳಗಿನವುಗಳನ್ನು ಒಳಗೊಂಡಿರುತ್ತದೆ.

1. ಮರದ ಮೂಲ ಬೆಲೆ (Basic value of the tree)
2. ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಅವಧಿಯಲ್ಲಿ ಉಳಿಕೆ ವರ್ಷಗಳ ಪರಿಹಾರದ ಮೊತ್ತ (Value of compensation for the remaining years of the economic bearing period)

ಮರಮುಟ್ಟು /ಉರುವಲಿಗೆ (Timber/Fire wood) ಉಪಯೋಗಿಸುವ ಮರದ ಭಾಗವನ್ನು ಮೌಲ್ಯಮಾಪನ ನಿಗಧಿಪಡಿಸುವಾಗ ಗಣನೆಗೆ ತೆಗೆದುಕೊಂಡಿರುವುದಿಲ್ಲ.

ಈ ಅವಧಿಯಲ್ಲಿನ ಮರಗಳ ಮೌಲ್ಯಮಾಪನ ಮಾಡುವಾಗ ಕೆಳಕಂಡ ಮೌಲ್ಯಗಳನ್ನು ಕಂಡು ಹಿಡಿದ ನಂತರ ಮೌಲ್ಯಮಾಪನ ಮಾಡುವ ಮರದ ಪ್ರಸಕ್ತ ಬೆಲೆಯನ್ನು ಕಂಡು ಹಿಡಿಯಲು ಸುಲಭವಾಗುತ್ತದೆ.

**1. ಮರದ ಮೂಲ ಬೆಲೆ (Basic value of the tree):-**

ಫಲ ಬಿಡುವ ಪೂರ್ವಾವಧಿಯಲ್ಲಿ ಮಾಡಿರುವ ವೆಚ್ಚದ ಒಟ್ಟು ಮೊತ್ತವನ್ನು ಆ ಮರದ ಮೂಲ ಬೆಲೆಯೆಂದು ಕರೆಯುತ್ತೇವೆ. ಈ ಕೆಳಗಿನ ಸೂತ್ರದಿಂದ ಮರದ ಮೂಲ ಬೆಲೆಯನ್ನು (Basic values) ಕಂಡು ಹಿಡಿಯಬಹುದು.

ಮೂಲಬೆಲೆ = ಪುನರ್ಘಟಿಸದ + ವೆಚ್ಚ { ಫಸಲು ಬಿಡುವ, ಪೂರ್ವಾವಧಿ x ಫಸಲು ಬಿಡುವ ಪೂರ್ವಾವಧಿಯಲ್ಲಿ ಪುನರ್ಘಟಿಸುವ ಸರಾಸರಿ ವಾರ್ಷಿಕ ವೆಚ್ಚ }

BasicValue = Non-recurring Expenditure + { Length of the pre- bearing Period x Average annual Re-curring Expenditure to be incurred during the prebearing stage }

ಮೌಲ್ಯಮಾಪನ ಮಾಡುವ ಅಧಿಕಾರಿ ಈ ಸೂತ್ರವನ್ನು ಉಪಯೋಗಿಸುವ ಅಗತ್ಯವಿರುವುದಿಲ್ಲ. ಏಕೆಂದರೆ ಸಿದ್ಧಪಡಿಸಿದ ಮೂಲ ಬೆಲೆಯನ್ನು ಅನುಬಂಧ–Iರಲ್ಲಿ ನೀಡಲಾಗಿದೆ.

**II. ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಅವಧಿಯಲ್ಲಿ ಉಳಿಕೆ ವರ್ಷಗಳ ಪರಿಹಾರದ ಮೊತ್ತ (Value of compensation for the remaining years of the economic bearing period)**

ಫಸಲು ಬಿಡುವ ಅವಧಿಯಲ್ಲಿನ ಮರಗಳ ಮೌಲ್ಯಮಾಪನ ಕಾರ್ಯವನ್ನು ತೀಕ್ಷ್ಣವಾಗಿ ಅವಲೋಕಿಸುವಂತಹ ಜಟಿಲವಾದ ಅಂಶವಾಗಿರುತ್ತದೆ. ಮರಗಳಿಗೆ ನೈಜ ಬೆಲೆಯನ್ನು ಕಂಡು ಹಿಡಿಯಬೇಕಾದಲ್ಲಿ, ಇದರಲ್ಲಿ ಅಡಕವಾಗಿರುವ ಅಂಶಗಳನ್ನು ಅಥವಾ ಸೂತ್ರಗಳನ್ನು ಎಚ್ಚರಿಕೆಯಿಂದ ಅಭ್ಯಸಿಸಿ, ಬೆಲೆ ನಿಗಧಿಪಡಿಸಬೇಕಾಗಿರುತ್ತದೆ. ಈ ಬೆಲೆಯನ್ನು ನಿಗಧಿಪಡಿಸಲು ಅವಶ್ಯವಿರುವ ಅಂಶಗಳು ಈ ಕೆಳಕಂಡಂತಿದೆ.

**a) ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಅವಧಿಯಲ್ಲಿನ ಉಳಿದ ವರ್ಷಗಳು (No. of remaining years in the economic bearing period)**

ಯಾವ ತೋಟಗಾರಿಕೆ ಗಿಡವನ್ನು ಮೌಲ್ಯಮಾಪನ ಮಾಡಲಾಗುತ್ತಿದೆಯೋ ಆ ಗಿಡದ ಆರ್ಥಿಕವಾಗಿ ಲಾಭದಾಯಕ ಇಳುವರಿ ನೀಡುವ ಅವಧಿಯಲ್ಲಿ ಇನ್ನು ಉಳಿದಿರುವ ಉಳಿಕೆ ವರ್ಷಗಳು ಎಷ್ಟು ಎಂಬುದು ಮೌಲ್ಯಮಾಪನ ಪ್ರಕ್ರಿಯೆಯಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಏಕೆಂದರೆ, ಈ ಅಂಶದ ಮೇಲೆಯೇ ಆ ಗಿಡವು ಒಂದು ವೇಳೆ ರೈತ/ಮಾಲೀಕನ ಒಡೆತನದಲ್ಲಿ ಮುಂದುವರೆದಿದ್ದ ಪಕ್ಷದಲ್ಲಿ ಎಷ್ಟು ಮೊತ್ತದ ಆದಾಯ ಬರುತ್ತಿತ್ತು ಎಂಬುದನ್ನು ತಿಳಿಯುವಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತದೆ.

ಆರ್ಥಿಕವಾಗಿ ಲಾಭದಾಯಕ ವಾಗಿರತಕ್ಕಂತಹ ಅವಧಿಯಲ್ಲಿ ಉಳಿಕೆ ವರ್ಷಗಳು = { ಆರ್ಥಿಕವಾಗಿ ಫಸಲು ಬಿಡುವ ಸರಾಸರಿ ಅವಧಿ + ಫಸಲಿನ ಪೂರ್ವಾವಧಿ } – ಮೌಲ್ಯಮಾಪನ ಮಾಡುವಾಗಿನ ಮರದ ವಯಸ್ಸು

No.of remaining years in the economic bearing period = { Average length of economic bearing period + Length of prebearing period } - Age of the tree at the time of valuation

ಇದನ್ನು ಸುಲಭವಾಗಿ ಕಂಡು ಹಿಡಿಯಲು ಅನುವಾಗುವಂತೆ ಮುಖ್ಯವಾದ ವಿವಿಧ ಜಾತಿಯ ತೋಟಗಾರಿಕೆ ಮರಗಳ ಫಸಲಿನ ಪೂರ್ವಾವಧಿ ಮತ್ತು ಆರ್ಥಿಕವಾಗಿ ಫಲ ಬಿಡುವ ಸರಾಸರಿ ಅವಧಿಯ ವಿವರಗಳನ್ನು ಅನುಬಂಧ–1ರಲ್ಲಿ ಕಾಣಿಸಲಾಗಿದೆ.

b. **ಫಸಲು ನೀಡುವ ಅವಧಿಯಲ್ಲಿ ಪ್ರತಿ ಮರಕ್ಕೆ ಬೀಳಬಹುದಾದ ಸರಾಸರಿ ವಾರ್ಷಿಕ ವೆಚ್ಚ (Average annual cost of cultivation to be incurred on one tree during the economic bearing period:-**

ತೋಟಗಾರಿಕೆ ನಿರ್ವಹಣೆ ಉತ್ಪಾದನೆ ಹಾಗೂ ಉತ್ಪಾದಕತೆಯ ಮೇಲೆ ವಿಶಿಷ್ಟ ಪ್ರಭಾವವನ್ನು ಹೊಂದಿದೆ. ತೋಟಗಳಲ್ಲಿ ವಾಣಿಜ್ಯ ತಳಿಗಳು ಇದ್ದರೂ ಸಹ ಉತ್ತಮವಾಗಿ ನಿರ್ವಹಣೆ ಮಾಡದಿದ್ದಲ್ಲಿ ಉತ್ತಮ ಫಸಲು ನೀಡದೆ ವಿಫಲವಾಗುತ್ತದೆ. ಉತ್ತಮವಾಗಿ ಫಸಲು ನೀಡುವ ತೋಟ ಎಂದು ಪರಿಗಣಿಸಲು ಅದರಲ್ಲಿನ ಮರಗಳು ಸತ್ವದಿಂದ ಕೂಡಿರಬೇಕು, ಆರೋಗ್ಯವಾಗಿರಬೇಕು, ರೋಗ/ಕೀಟ ರಹಿತವಾಗಿರಬೇಕು. ಅಲ್ಲದೆ ಶಿಫಾರಸ್ಸಿಗನುಗುಣವಾಗಿ ಗಿಡಗಳ ಮಧ್ಯೆ ಅಂತರ ಇರಬೇಕು. ಇಲ್ಲದಿದ್ದಲ್ಲಿ ಕೊಂಬೆಗಳು ಒಂದಕ್ಕೊಂದು ಜೊತೆಯಾಗಿ ಸೂರ್ಯನ ಕಿರಣಗಳು ಎಲೆಯ ಮೇಲೆ ನೇರವಾಗಿ ಬೀಳುವುದನ್ನು ತಡೆಯುವುದರಿಂದ ಮರದ ಬೆಳವಣಿಗೆ ಕುಂಠಿತಗೊಳ್ಳುವುದಲ್ಲದೆ, ಇಳುವರಿ ಸಹ ಕಡಿಮೆಯಾಗುತ್ತದೆ.

ಆದ್ದರಿಂದ ಮೇಲ್ಕಂಡ ಅಂಶಗಳನ್ವಯ ತೋಟಗಾರಿಕೆ ಮರಗಳನ್ನು (Horticultural trees) ಈ ಕೆಳಕಂಡಂತೆ 4 ವರ್ಗಗಳನ್ನಾಗಿ ವರ್ಗೀಕರಿಸಲಾಗಿದೆ.

**ವರ್ಗ1:–** ಈ ವರ್ಗದಡಿ ಬರುವ ಮರಗಳು ಕೃಷಿ ವಲಯಕ್ಕೆ ಅನುಗುಣವಾಗಿ ಬೆಳೆಯಲು ಶಿಫಾರಸ್ಸು ಮಾಡಿದ ಅತ್ಯುತ್ತಮ ಜಾತಿ/ತಳಿಯದ್ದಾಗಿರಬೇಕು ಹಾಗೂ ಫಲವತ್ತಾದ ಮಣ್ಣಿನಲ್ಲಿ ಬೆಳೆದಿರಬೇಕು. ಶಿಫಾರಸ್ಸಿಗನುಗುಣವಾಗಿ ಗಿಡಗಳ ಮಧ್ಯೆ ಅಂತರವಿರಬೇಕು. ಎಲ್ಲಾ ಅಗತ್ಯವಾದ ಬೇಸಾಯ ಮತ್ತು ನಿರ್ವಹಣೆ ಕಾರ್ಯಗಳನ್ನು ಕೈಗೊಂಡಿರಬೇಕು. ಮರಗಳು ಕೀಟ/ರೋಗ ರಹಿತವಾಗಿರಬೇಕು.

ಒಂದೇ ಮಾತಿನಲ್ಲಿ ಹೇಳುವುದಾದರೆ ಈ ವರ್ಗಕ್ಕೆ ಸೇರುವ ಮರಗಳು ಆರೋಗ್ಯವಾಗಿದ್ದು, ಸತ್ವದಿಂದ ಕೂಡಿರಬೇಕು. ಹಾಗೂ ಹೆಚ್ಚು ಇಳುವರಿ ನೀಡುವಂತಹವಾಗಿದ್ದು, ಒಳ್ಳೆಯ ವಿಸ್ತಾರದಿಂದ ಕೂಡಿರಬೇಕು. (Very good canopy).

**ವರ್ಗ 2:–** ಈ ವರ್ಗಕ್ಕೆ ಸೇರುವ ಮರವು ಕೃಷಿ ವಲಯಕ್ಕೆ ಅನುಗುಣವಾಗಿ ಬೆಳೆಯಲು ಶಿಫಾರಸ್ಸು ಮಾಡಿದ ತಳಿ ಅಥವಾ ಒಳ್ಳೆಯ ಸ್ಥಳೀಯ ತಳಿಯಾಗಿರಬಹುದು. ಸಾಧಾರಣ ಗುಣಮಟ್ಟದ ಮಣ್ಣಿನಲ್ಲಿ, ಶಿಫಾರಸ್ಸು ಮಾಡಿರುವುದಕ್ಕಿಂತ ಸ್ವಲ್ಪಕಡಿಮೆ ಅಂತರದಲ್ಲಿ ಬೆಳೆಸಿದಂತಹ ಗಿಡಗಳು, ಸಾಗುವಳಿ ಮತ್ತು ನಿರ್ವಹಣೆಯನ್ನು ಮಾಡಿರುವಂತಹವು ಹಾಗೂ ರೋಗ/ಕೀಟ ರಹಿತವಾಗಿರಬೇಕು.

ಈ ವರ್ಗದ ಮರಗಳು ಸಾಧಾರಣ ಆರೋಗ್ಯ ಹೊಂದಿ, ಸಾಧಾರಣ ಇಳುವರಿ ನೀಡುವಂತಹ ಮರಗಳು.

**ವರ್ಗ3:–** ಈ ವರ್ಗಕ್ಕೆ ಸೇರುವ ಮರಗಳು ಕೃಷಿ ವಲಯಕ್ಕೆ ಅನುಗುಣವಾಗಿ ಶಿಫಾರಸ್ಸು ಮಾಡಿರಬಹುದು/ಮಾಡಿಲ್ಲದಿರಬಹುದು. ಕಡಿಮೆ ಫಲವತ್ತತೆಯ ಮಣ್ಣಿನಲ್ಲಿ ಶಿಫಾರಿಸಿದ ಅಂತರದ ಅರ್ಧಕ್ಕಿಂತ ಕಡಿಮೆ ಅಂತರದಲ್ಲಿ ಬೆಳೆದಿರುವ ಮತ್ತು ಸಾಧಾರಣ ಮಟ್ಟದಲ್ಲಿ ಬೇಸಾಯ ಕ್ರಮಗಳನ್ನು ತೆಗೆದುಕೊಂಡಿರುವುದು ಹಾಗೂ ರೋಗ/ಕೀಟ/ರೋಗ ಚಿಹ್ನೆ ಕಾಣಿಸುವ ಮರಗಳು ಈ ವರ್ಗಕ್ಕೆ ಸೇರಿರುತ್ತದೆ.

ಈ ವರ್ಗದ ಮರಗಳು ಸಾರವಿಲ್ಲದ, ಸತ್ವವಿಲ್ಲದ ಬೆಳವಣಿಗೆಯಿಂದ ಕೂಡಿದ್ದು, ರೆಂಬೆಗಳು ಸರಿಯಾಗಿ ಹರಡಿಕೊಂಡಿರುವುದಿಲ್ಲ. ಅಲ್ಲದೇ ಎಲೆಗಳು ರೋಗ/ಕೀಟಗಳ ಹಾವಳಿಯಿಂದ ಆವೃತ್ತವಾಗಿದ್ದು, ಉತ್ಪಾದಕತೆ ತುಂಬಾ ಕಡಿಮೆ ಇರುತ್ತದೆ.

**ವರ್ಗ4:–** ಈ ವರ್ಗಕ್ಕೆ ಸೇರುವ ಮರಗಳು ಸ್ಥಳೀಯ ಕೃಷಿ ವಲಯಕ್ಕೆ ಶಿಫಾರಸ್ಸು ಮಾಡಿದ, ಕೃಷಿ ವಲಯಕ್ಕೆ ಹೊಂದುವ/ಹೊಂದದೇ ಇರುವ ತಳಿಯಾಗಿದ್ದು, ಸ್ಥಳೀಯ ತಳಿ ಅಥವಾ ಸ್ಥಳೀಯ ವಾತಾವರಣಕ್ಕೆ ಹೊಂದಿಕೊಳ್ಳದ ತಳಿಯಾಗಿರಬಹುದು. ನಿರ್ವಹಣೆ/ಸಾಗುವಳಿ ಕಾರ್ಯವನ್ನು ಸಂಪೂರ್ಣವಾಗಿ ಕಡೆಗಣಿಸಿದ್ದು, ರೋಗ/ಕೀಟಗಳ ಭಾದೆಯಿಂದ ಕೂಡಿದ್ದು, ಸತ್ವವಿಲ್ಲದ ಮಣ್ಣಿನಲ್ಲಿ ಬೆಳೆದಂತಹ ಮರಗಳಾಗಿರುತ್ತದೆ.

ಅಂದರೆ ಮರಗಳು, ಅನಾರೋಗ್ಯದಿಂದ ಕೂಡಿದ್ದು, ಸಾರವಿಲ್ಲದ ಬೆಳವಣಿಗೆ ಹೊಂದಿರಬೇಕು. ಕಳಪೆ ಫಲವತ್ತೆಯ ಮಣ್ಣಿನಲ್ಲಿ ಬೆಳೆದಂತಹವಾಗಿರಬೇಕು. ಅಂದರೆ ಮರಗಳನ್ನು ಸಂಪೂರ್ಣವಾಗಿ ಅಲಕ್ಷ ಮಾಡಿದಂತಹವಾಗಿರಬೇಕು. ಅಂತಹ ಮರಗಳನ್ನು ಈ ವರ್ಗಕ್ಕೆ ಸೇರಿಸಬೇಕು.

ಈ ಹಿನ್ನೆಲೆಯಲ್ಲಿ, ಮೌಲ್ಯಮಾಪನ ಅಧಿಕಾರಿಯು ಮರಗಳನ್ನು ಮೌಲ್ಯಮಾಪನ ಮಾಡುವಾಗ, ಮೇಲ್ಕಂಡ ವರ್ಗಗಳನ್ವಯ ತಿಳಿಸಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹೆಚ್ಚಿನ ಬುದ್ಧಿಶಕ್ತಿ ಉಪಯೋಗಿಸಿಕೊಂಡು ಖಚಿತವಾದ ವರ್ಗಕ್ಕೆ ಸೇರಿಸಬೇಕಾಗಿರುತ್ತದೆ. ಅದರಂತೆ, ಮೌಲ್ಯಮಾಪನ ಮಾಡುವ ಮರವನ್ನು ಒಂದು ವರ್ಗಕ್ಕೆ ವರ್ಗೀಕರಿಸಿದ ಮೇಲೆ ಅನುಬಂಧದಲ್ಲಿ ತೋರಿಸಿರುವಂತೆ ಆ ಮರಕ್ಕೆ ತಗಲುವ ಸರಾಸರಿ ವಾರ್ಷಿಕ ವೆಚ್ಚ ನಿಗಧಿಪಡಿಸಬೇಕು.

**c. ಒಂದು ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯ (Average annual income likely to be obtained from one tree):-**

ಯಾವುದೇ ಒಂದು ಬೆಳೆಯನ್ನು ಮೌಲ್ಯಮಾಪನ ಮಾಡುವಾಗ ಮೇಲ್ಕಾಣಿಸಿದ ಯಾವುದೇ ಒಂದು ವರ್ಗಕ್ಕೆ ವರ್ಗೀಕರಿಸಿದ ಮೇಲೆ, ಅನುಬಂಧ–1ರಲ್ಲಿ ತೋರಿಸಿರುವಂತೆ, ಆ ವರ್ಗಕ್ಕೆ ನೀಡಿರುವ ವಾರ್ಷಿಕ ಸರಾಸರಿ ವೆಚ್ಚವನ್ನು ನಿರ್ಧರಿಸಿದಂತೆ ಆ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯವನ್ನು ಸಹ ನಿಗಧಿಪಡಿಸುವುದು. ಮೌಲ್ಯಮಾಪನ ಅಧಿಕಾರಿಯು ಮೇಲ್ಕಂಡ ವರ್ಗಗಳಲ್ಲಿ ಯಾವುದಾದರೂ ಒಂದು ವರ್ಗಕ್ಕೆ ಮರವನ್ನು ವರ್ಗೀಕರಿಸಿ ಅನುಬಂಧದಲ್ಲಿ ತೋರಿಸಿರುವಂತೆ ಆ ಮರಕ್ಕೆ ಮಾಡುವ ಸರಾಸರಿ ವಾರ್ಷಿಕ ವೆಚ್ಚ ನಿರ್ಧರಿಸಿದಂತೆ ಆ ಮರದಿಂದ ಸಿಗುವ ಸರಾಸರಿ ವಾರ್ಷಿಕ ಆದಾಯವನ್ನು ಸಹ ಅದೇ ವರ್ಗದಲ್ಲಿ ಉಲ್ಲೇಖಿಸಬೇಕು. ಯಾವುದೇ ಕಾರಣಕ್ಕೂ ಸರಾಸರಿ ವಾರ್ಷಿಕ ವೆಚ್ಚವನ್ನು ಒಂದು ವರ್ಗಕ್ಕೆ ಉಲ್ಲೇಖಿಸಿ ಆ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯವನ್ನು ಇನ್ನೊಂದು ವರ್ಗಕ್ಕೆ ಉಲ್ಲೇಖಿಸಬಾರದು. ಉದಾ:ಒಂದು ಮರವನ್ನು ವರ್ಗ 2ಕ್ಕೆ ವರ್ಗೀಕರಿಸಿದ ಮೇಲೆ ಆ ಮರಕ್ಕೆ ಮಾಡುವ ಸರಾಸರಿ ವಾರ್ಷಿಕ ವೆಚ್ಚವನ್ನು ಅನುಬಂಧದಲ್ಲಿನ ವರ್ಗ 2ನ್ನು ಉಲ್ಲೇಖಿಸಬೇಕು. ಅದರಂತೆ ಆ ಮರದಿಂದ ಪಡೆಯುವ ಸರಾಸರಿ ವಾರ್ಷಿಕ ಆದಾಯವನ್ನು ಸಹ ವರ್ಗ–2ರಲ್ಲೇ ಉಲ್ಲೇಖಿಸಬೇಕು.

**d. ಡಿಸ್ಕೌಂಟ್ ಫ್ಯಾಕ್ಟರ್ (Discount factor):-**

ಈ ಮೌಲ್ಯಮಾಪನ ಕಾರ್ಯದ ವಿಶೇಷತೆಯೆಂದರೆ, ಡಿಸ್ಕೌಂಟ್ ಫ್ಯಾಕ್ಟರ್ ಬಳಕೆ, ಭೂ ಸ್ವಾಧೀನದ ಸಮಯದಲ್ಲಿ ಪರಿಹಾರ ಮೊತ್ತವನ್ನು ನಿರ್ಧರಿಸುವುದೆಂದರೆ, ಸದರಿ ಮರವನ್ನು ಕಡಿಯದೇ ಉಳಿಸಿಕೊಂಡಲ್ಲಿ ಉಳಿಕೆ ಲಾಭದಾಯಕವಾಗಿ ಫಲ ಬಿಡುವ ಅವಧಿಯಲ್ಲಿ ಆ ಮರದಿಂದ ಬರಬಹುದಾದ ಆದಾಯವನ್ನು ನಿರ್ಧರಿಸುವುದಾಗಿರುತ್ತದೆ. ಮುಂದೆ ಅಥವಾ ಭವಿಷ್ಯತ್ತಿನಲ್ಲಿ ಬರಬಹುದಾದ ಆದಾಯವನ್ನು ಈಗಲೇ ಪಾವತಿಸುವುದಾದಲ್ಲಿ ಭವಿಷ್ಯದ ಮೊತ್ತವನ್ನು ಈಗಿನ ಮೌಲ್ಯಕ್ಕೆ ಪರಿವರ್ತಿಸಬೇಕಾಗುತ್ತದೆ. ಇದನ್ನು ಡಿಸ್ಕೌಂಟ್ ಫ್ಯಾಕ್ಟರ್ (ಶೇ.8) ಉಪಯೋಗಿಸಿ ನಿರ್ಧರಿಸಬಹುದಾಗಿರುತ್ತದೆ. ಇದನ್ನು ಸುಲಭವನ್ನಾಗಿಸಲು ಸ್ಟಾಂಡರ್ಡ್ ಡಿಸ್ಕೌಂಟ್ ಫ್ಯಾಕ್ಟರ್ ಅನ್ನು ವಿವಿಧ ಉಳಿಕೆ ವರ್ಷಗಳ ಗುಂಪುಗಳಿಗೆ ಈ ಕೆಳಗೆ ಕಾಣಿಸಿದ ಪಟ್ಟಿಯಲ್ಲಿ ನೀಡಲಾಗಿದೆ.

| ಆರ್ಥಿಕವಾಗಿ ಫಲ ಬಿಡುವ ಅವಧಿಯಲ್ಲಿ ಉಳಿದ ವರ್ಷಗಳು | ಡಿಸ್ಕೌಂಟ್ ಫ್ಯಾಕ್ಟರ್ |
|---|---|
| 1–5 | 1.05 |
| 6–10 | 1.40 |
| 11–15 | 1.75 |
| 16–20 | 2.10 |
| 21–25 | 2.45 |
| 26–30 | 2.80 |
| 31–35 | 3.15 |
| 36–40 | 3.50 |
| 41–45 | 3.85 |
| 46–50 | 4.20 |
| 51–55 | 4.55 |
| 56–60 | 4.90 |
| 61–65 | 5.25 |
| 66–70 | 5.60 |
| 71–75 | 5.95 |
| 76–80 | 6.30 |
| 81–85 | 6.65 |
| 86–90 | 7.00 |

ಭವಿಷ್ಯತ್ತಿನ ಕಾಲ್ಪನಿಕ ಬೆಲೆಯನ್ನು ಪ್ರಸ್ತುತ ಬೆಲೆಯನ್ನಾಗಿ ಪರಿವರ್ತಿಸುವಾಗ ಈ ಕೆಳಕಂಡ ಸೂತ್ರದ ಅನುಸಾರ ಕಂಡು ಹಿಡಿಯಬೇಕು.

ಆರ್ಥಿಕವಾಗಿ ಲಾಭದಾಯಕವಾಗಿ ಫಸಲು ನೀಡುವ ಉಳಿದ ಅವಧಿಯಲ್ಲಿ ಸಿಗಬಹುದಾದ ಮೊತ್ತದ ಪ್ರಸ್ತುತ ಮೌಲ್ಯ(ಪ್ರಸ್ತುತ ಬೆಲೆ) = ಆರ್ಥಿಕವಾಗಿ ಲಾಭದಾಯಕ ವಾಗಿರತಕ್ಕಂತಹ ಉಳಿದ ಅವಧಿ x { ಸರಾಸರಿ ವಾರ್ಷಿಕ ಆದಾಯ – ಸರಾಸರಿ ವಾರ್ಷಿಕ ವೆಚ್ಚ } / ಡಿಸ್ಕೌಂಟ್ ಫ್ಯಾಕ್ಟರ್

Present value of the amount projected for the remaining number of years in the economic bearing period(PV) = Remaining number of years in the economic bearing period x (Average annual income - Average annual Expenditure) / Discount factor

**ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಉಳಿದ ಅವಧಿಯಲ್ಲಿ ನೀಡಬೇಕಾದ ನಿಖರವಾದ ಪರಿಹಾರ**

**(Actual compensation for the remaining number of years in the economic bearing period):-**

ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಪ್ರಕೃತಿ ವಿಕೋಪದಿಂದ ಬೆಳೆಹಾನಿ ಸಂಭವಿಸಬಹುದಾಗಿದ್ದು, ಈ ಅಂಶವನ್ನು ಸಹ ತರ್ಕಬದ್ಧವಾಗಿ ನಿರೀಕ್ಷಿಸಬೇಕಾಗಿರುತ್ತದೆ. ಆದುದರಿಂದ ಪ್ರಕೃತಿ ವಿಕೋಪದಿಂದ ಸರಾಸರಿ ಪ್ರತಿ ವರ್ಷ ಶೇ.20ರ ಭಾಗ ಬೆಳೆಹಾನಿ ಸಂಭವಿಸಬಹುದಾಗಿದೆ ಎಂದು ಪರಿಗಣಿಸಲಾಗಿರುತ್ತದೆ. ಆದ್ದರಿಂದ ಒಟ್ಟಾರೆ ಪ್ರಸ್ತುತ ಮೊತ್ತದಲ್ಲಿ ಶೇ.20ರ ಭಾಗವನ್ನು ಕಳೆಯಬೇಕಾಗಿರುತ್ತದೆ. ಅದರಂತೆ, ಈ ಕೆಳಕಂಡ ಸೂತ್ರದಿಂದ ಬೆಳೆಗಾರನಿಗೆ ನೀಡಬಹುದಾದ ನಿಖರವಾದ ಪರಹಾರವನ್ನು ಕಂಡು ಹಿಡಿಯಬಹುದು.

ಆರ್ಥಿಕವಾಗಿ ಲಾಭದಾಯಕವಾಗಿರತಕ್ಕಂತಹ ಉಳಿದ ಅವಧಿಯಲ್ಲಿ ನೀಡಬೇಕಾದ ನಿಖರವಾದ ಪರಿಹಾರ = ಪ್ರಸ್ತುತ ಬೆಲೆ – { ಪ್ರಸ್ತುತ ಬೆಲೆ / 5 }

Actual amount of compensation for the remaining number of years in the economic bearing period = PV - { PV / 5 }

**(ಟಿಪ್ಪಣಿ:–** ಮೌಲ್ಯಮಾಪನ ಮಾಡುವ ಮರವು ಮಾರುಕಟ್ಟೆ ಸ್ಥಳದಿಂದ ಹತ್ತಿರದಲ್ಲಿದ್ದರೆ, (ಅಂದರೆ 10ಕಿ.ಮೀ ಆಸುಪಾಸಿನಲ್ಲಿ) ನಿಗಧಿಪಡಿಸಿದ ಪರಿಹಾರದ ಒಟ್ಟು ಮೊತ್ತಕ್ಕೆ ಗರಿಷ್ಟ ಶೇ.5 (Maximum of 5%) ರಷ್ಟು ಹೆಚ್ಚಿನ ಮೊತ್ತವನ್ನು ನೀಡಬಹುದು. ಇದು ಸಂಪೂರ್ಣವಾಗಿ ಮೌಲ್ಯಮಾಪನ ಮಾಡುವ ಅಧಿಕಾರಿಯ ವಿವೇಚನೆಗೊಳಪಟ್ಟಿರುತ್ತದೆ. ಆದಾಗ್ಯೂ ಮೌಲ್ಯ ಮಾಪನ ಅಧಿಕಾರಿಯು ಈ ರೀತಿ ನಿಗಧಿಪಡಿಸುವ ಹೆಚ್ಚಿನ ಲಾಭಾಂಶ ಮೊತ್ತವು ವರ್ಗ 3 ಮತ್ತು ವರ್ಗ 4ರಡಿ ಬರುವ ಮರಗಳಿಗೆ ಅನ್ವಯಿಸಬಾರದು)

**ಫಸಲು ಬಿಡುವ ಹಂತದಲ್ಲಿನ ಮರದ ಅಂತಿಮ ಪರಿಹಾರದ ಮೊತ್ತ (Final Compensation for a tree in bearing stage):-**

ಫಸಲು ಬಿಡುವ ಹಂತದಲ್ಲಿನ ಮರಕ್ಕೆ ಅಂತಿಮವಾಗಿ ನೀಡುವ ಮೊತ್ತವನ್ನು ಈ ಕೆಳಕಂಡ ಸೂತ್ರದಿಂದ ಕಂಡು ಹಿಡಿಯಬೇಕು.

ಫಸಲು ಬಿಡುವ ಮರದ ಅಂತಿಮ ಪರಿಹಾರದ ಮೊತ್ತ = ಮರದ ಮೂಲ ಬೆಲೆ + ಆರ್ಥಿಕವಾಗಿ ಲಾಭದಾಯಕ ಫಸಲು ಬಿಡುವ ಉಳಿದ ಅವಧಿಯಲ್ಲಿ ನೀಡಬೇಕಾದ ನಿಖರವಾದ ಪರಿಹಾರ

Value of final Compensation for a bearing tree = Basic value of tree + Actual amount of compensation for the remaining number of years in the bearing period

**ಸೂಚನೆ:**

1) ಈ ಮಾರ್ಗಸೂಚಿಯು ಸರ್ಕಾರದ ಆದೇಶದ ದಿನಾಂಕದಿಂದ ಮುಂದಿನ 2 ವರ್ಷಗಳವರೆಗೆ(2013–14ರಿಂದ 2014–15) ಚಾಲ್ತಿಯಲ್ಲಿರುತ್ತದೆ
2) ಆರ್ಥಿಕವಾಗಿ ಲಾಭದಾಯಕ ಫಸಲು ಬಿಡುವ ಅವಧಿ ಮೀರಿದಂತಹ ಮರಗಳನ್ನು ಮರಮುಟ್ಟು/ಉರುವಲಿಗಾಗಿ ಮಾತ್ರ ಮೌಲ್ಯಮಾಪನ ಮಾಡಬೇಕಾಗಿದ್ದು, ಇದು ಅರಣ್ಯ ಇಲಾಖೆಗೆ ಸಂಬಂಧಿಸಿರುತ್ತದೆ.
3) ಮೌಲ್ಯಮಾಪನ ಮಾಡುವ ಮರದ ಪ್ರಸ್ತುತ ಬೆಲೆಯು ಇತರೆ ರಚನೆಗಳಾದ ಭೂಮಿ, ಬೇಲಿ, ಪೆಂಡಾಲ್, ಬಾವಿ, ಫಾರಂ ಹೌಸ್ ಇತ್ಯಾದಿಗಳಿಂದ ಸಂಪೂರ್ಣವಾಗಿ ಹೊರತಾಗಿರುತ್ತದೆ. ಈ ರಚನೆಗಳ ಮೌಲ್ಯಮಾಪನವನ್ನು ಕಂದಾಯ ಇಲಾಖೆ/ಲೋಕೋಪಯೋಗಿ ಇಲಾಖೆಯವರು ಪ್ರತ್ಯೇಕವಾಗಿ ಮಾಡುತ್ತಾರೆ.

4) ಸಾಲುಮರಗಳನ್ನು ಕೇವಲ ಅಲಂಕಾರಕ್ಕಾಗಿ ಉಪಯೋಗಿಸುವುದಾಗಿದ್ದು, ಇವುಗಳಿಗೆ ವಾಣಿಜ್ಯವಾಗಿ ಬೆಲೆ ಇಲ್ಲದ್ದರಿಂದ, ಇವುಗಳನ್ನು ಮರಮುಟ್ಟು/ಉರುವಲಿಗಾಗಿ ಮಾತ್ರ ಮೌಲ್ಯಮಾಪನ ಮಾಡಬೇಕು. ಇದು ಅರಣ್ಯ ಇಲಾಖೆಗೆ ಸಂಬಂದಿಸಿರುತ್ತದೆ.

5) ರಾಜ್ಯಪತ್ರ/ಇತರೆ ಮಾಧ್ಯಮಗಳ ಮುಖಾಂತರ ಭೂ ಸ್ವಾಧೀನ ಪ್ರಕ್ರಿಯೆಯ ನೋಟೀಸ್ ನೀಡಿದ ನಂತರ ನೆಡುವ ತೋಟಗಾರಿಕೆ ಬೆಳೆಗಳನ್ನು ಅಭಿವೃದ್ಧಿಪಡಿಸುವ ತೋಟಗಳನ್ನು ಯಾವುದೇ ಕಾರಣಕ್ಕೂ ಮೌಲ್ಯಮಾಪನ ಮಾಡಬಾರದು.

6) ತೋಟಗಾರಿಕೆ ಬೆಳೆಗಳನ್ನು ಮೌಲ್ಯಮಾಪನ ಮಾಡುವಾಗ ಸಂಬಂಧಿಸಿದ ಭೂ ಸ್ವಾಧೀನಾಧಿಕಾರಿಗಳು ಸ್ಥಳೀಯ ತೋಟಗಾರಿಕೆ ಅಧಿಕಾರಿಗಳ ಜೊತೆಗೂಡಿ ಸರ್ವೆ ನಂಬರ್, ಮೌಲ್ಯಮಾಪನ ಮಾಡಬೇಕಾದ ಮರಗಳ ವಿವರ ಇತ್ಯಾದಿಗಳನ್ನು ಖಚಿತಪಡಿಸಿರಬೇಕು.

7) ಸಂಬಂಧಿಸಿದ ತಾಲ್ಲೂಕು ತೋಟಗಾರಿಕೆ ಅಧಿಕಾರಿಯು, ಮೌಲ್ಯಮಾಪನ ಕಾರ್ಯ ಮುಗಿಸಿದ ನಂತರ, ವರದಿಯನ್ನು ಮೇಲುಸಹಿಗಾಗಿ ಸಂಬಂದಪಟ್ಟ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ರವರಿಗೆ ತಲುಪಿಸಬೇಕು. ತದನಂತರ ತೋಟಗಾರಿಕೆ ಉಪನಿರ್ದೇಶಕರು (ಜಿಲ್ಲಾ ಪಂಚಾಯತ್)ರವರು ವರದಿಯನ್ನು ಪರಿಶೀಲಿಸಿ ಮೇಲುಸಹಿ ಮಾಡಿ ಸಂಬಂದಪಟ್ಟ ಭೂ ಸ್ವಾಧೀನಾಧಿಕಾರಿಗಳಿಗೆ ಕಳುಹಿಸಿಕೊಡಬೇಕು. ಮೌಲ್ಯಮಾಪನದ ಬಗ್ಗೆ ಯಾವುದೇ ತಕರಾರು ಎದುರಾದಲ್ಲಿ ಸಂಬಂಧಿಸಿದ ಶಾಖೆಯು ಮಧ್ಯಸ್ಥರಾಗಿರುತ್ತಾರೆ.

8) ಈ ಮಾರ್ಗಸೂಚಿಯು ಸಂಪೂರ್ಣವಾಗಿ ಆಡಳಿತಾತ್ಮಕವಾಗಿದ್ದು, ಸಂಬಂದಿಸಿದ ಭೂ ಸ್ವಾಧೀನಾಧಿಕಾರಿಯ ಕೋರಿಕೆಯಂತೆ ಅವರಿಗೆ ನೀಡಬಹುದಾದ ವಿವರಗಳಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ.

**PR.1116**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರ 128 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 316 ಎನ್‌ಸಿಇ 2006 ದಿನಾಂಕ: 16.10.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 253 ಎನ್‌ಸಿಇ 2011 ದಿನಾಂಕ: 02.01.2012.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/FFHPPL-128MW/HMM/2012/2508 ದಿನಾಂಕ: 14/15.09.2012 ಮತ್ತು 01.01.2013

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯಲ್ಲಿ 62.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಸದರಿ ಕಂಪನಿಗೆ ಮಂಜೂರಾಗಿರುವ 62.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿ 35.00 ಮೆ.ವ್ಯಾ. ಯೋಜನೆಯಿದ್ದು, ಇದರಲ್ಲಿ 32.00 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು **128.00 ಮೆ.ವ್ಯಾ.**ಗೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ 100 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯವನ್ನು ಪಿಪಿಎ ಮಾಡಿಕೊಳ್ಳುವ ಮತ್ತು ಯೋಜನೆಯನ್ನು 31.7.2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಿ ಅದೇಶಿಸಲಾಗಿತ್ತು.

| Geographical Area Details of the Project | Sanctioned capacity in MW | Enhancement Proposed in MW in Stage-1 | No. of WTGs & rating in KW | Total capacity including proposed enhancement in MW |
|---|---|---|---|---|
| A proposed area has a gentle elevation and is spread across the villages as mentioned under column 4. And it appears to be an agriculture land. The average elevation of the site is about 650m and the area is held in the following Geographical co-oridinates :-<br>**Latitude**: 16°30'0"- 16°41'42" N<br>**Longitude**: 76°0'0"- 76°7'22'' E<br>**Ridge peaks:** 565, 582, 601, 661, 662, 654, 626, 646, 638, 583, 619, 578, 577, 653, 662, 655, 662 and 659m AMSL. | 32 MW | 96 MW | 80 x 1600 | 128 MW<br>(32 MW + 96 MW) |

ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿ ಮಂಜೂರಾಗಿರುವ 128 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ನೀಡಿರುವ ಕಾಲಾವಕಾಶವು ದಿನಾಂಕ 31.7.2012ಕ್ಕೆ ಮುಕ್ತಾಯಗೊಂಡಿದ್ದು, ಸದರಿ ಯೋಜನೆಯು ಪ್ರಗತಿಯಲ್ಲಿದ್ದು, ಯೋಜನಾ ಅನುಷ್ಠಾನಕ್ಕೆ ಕಾಲಾವಕಾಶವನ್ನು ಮೂರು ವರ್ಷಗಳವರೆಗೆ ವಿಸ್ತರಿಸಲು ಹಾಗೂ ಪೂರ್ಣ 128 ಮೆ.ವ್ಯಾ. ಸಾಮರ್ಥ್ಯವನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿ ನೀಡುವಂತೆ ಅಭಿವೃದ್ದಿದಾರರು ಕೋರಿರುವುದರಿಂದ ಸದರಿಯವರ ಕೋರಿಕೆಯಂತೆ ಪೂರ್ಣ 128 ಮೆ.ವ್ಯಾ. ಸಾಮರ್ಥ್ಯವನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ ಅನುಮತಿ ನೀಡಬಹುದೆಂದು ಮತ್ತು ನಿಗಧಿತ ಕಾಲಾವಕಾಶ ವಿಸ್ತರಣಾ ಶುಲ್ಕ ಪಾವತಿಸುವ ಷರತ್ತಿಗೊಳಪಟ್ಟು ಸದರಿ ಯೋಜನೆಯ ಅನುಷ್ಠಾಕ್ಕೆ ಮೂರು ವರ್ಷಗಳ ಕಾಲಾವಕಾಶವನ್ನು ವಿಸ್ತರಿಸಬಹುದೆಂದು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 143 ಎನ್‌ಸಿಇ 2012, ಬೆಂಗಳೂರು, ದಿನಾಂಕ: 24–01–2013**

ಮೆ:: ಫಾರ್ಚುನ್ ಫೈವ್ ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿ ಮಂಜೂರಾಗಿರುವ 128.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ 01.08.2012 ರಿಂದ ದಿನಾಂಕ 31.07.2015 ರವರೆಗೆ ವಿಸ್ತರಿಸಿ ಆದೇಶಿಸಿದೆ.

- ಪ್ರಸ್ತಾವಿತ ಯೋಜನಾ ಪ್ರದೇಶವು ಖಾಸಗಿ ಜಮೀನಲ್ಲಿ ಬರುವುದರಿಂದ ಪೂರ್ಣ ಸಾಮರ್ಥ್ಯವನ್ನು 3ನೇ ವ್ಯಕ್ತಿಯೊಂದಿಗೆ ವೀಲಿಂಗ್ ಮತ್ತು ಬ್ಯಾಂಕಿಂಗ್ ಮಾಡಿಕೊಳ್ಳಲು ಅನುಮತಿಸಿದೆ.
- ಅಭಿವೃದ್ಧಿದಾರರು ನಿಯಮಾನುಸಾರ ಕಾಲಾವಕಾಶ ವಿಸ್ತರಣಾ ಶುಲ್ಕವನ್ನು ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ರವರ ಪತ್ರ ಸಂಖ್ಯೆ : KRED/08/FFHPPL-128MW/ HMM/2013/ 165 ದಿನಾಂಕ 19–01–2013 ರಲ್ಲಿ ನಮೂದಿಸಿರುವಂತೆ ಪಾವತಿಸತಕ್ಕದ್ದು.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

PR.981

SC.25

## ಇಂಧನ ಸಚಿವಾಲಯ

**ವಿಷಯ:** ಮೆ: ಫೋರ್ ಎಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 17.00 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯದಿಂದ 5.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಎಫಿಶಿಯನ್ಸಿ ಲಿಮಿಟೆಡ್ ರವರಿಗೆ ವರ್ಗಾಯಿಸಿ, ಸದರಿ ಸಾಮರ್ಥ್ಯವನ್ನು 46.50 ಮೆ.ವ್ಯಾ.ಗೆ ಹೆಚ್ಚಿಸುವ ಕುರಿತು

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಎನ್‌ಸಿಇ 2006 ದಿನಾಂಕ: 16.10.2006.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GIWEEL-5 MW to 46.50/Belgaum/2012/2220 ದಿನಾಂಕ: 01/08.08.2012 ಮತ್ತು KRED/08/GIWEEL- 5 to 46.5 MW/2012/2812 ದಿನಾಂಕ: 31.10/02.11.2012.

3) ದಿನಾಂಕ 21.09.2012 ಹಾಗೂ ದಿ.03.11.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಮೇಲಿನ ಆದೇಶದಲ್ಲಿ ಮಂಜೂರಾಗಿರುವ 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ, ಹಂಚಿಕೆ ಆದೇಶದ ಕ್ರಮ ಸಂಖ್ಯೆ (3) ರಲ್ಲಿಯ ಬೆಳಗಾವಿ ಜಿಲ್ಲೆಯ ಅರಳಿಕಟ್ಟೆ, ವಂತಮೂರಿ, ಜಾರ್ಕಿಹೋಳಿ, ರುಸ್ತುಂಪುರ ಮತ್ತು ಚಿಲಾಬಾವಿ ಗ್ರಾಮಗಳಲ್ಲಿ ಮಂಜೂರಾಗಿರುವ ಭಾಗಶಃ ಸಾಮರ್ಥ್ಯವಾದ 5.00 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಎಫಿಶಿಯನ್ಸಿ ಲಿಮಿಟೆಡ್ ರವರಿಗೆ ವರ್ಗಾಯಿಸಿ ಸದರಿ ಸಾಮರ್ಥ್ಯವನ್ನು 46.50 ಮೆ.ವ್ಯಾ.ಗೆ ಹೆಚ್ಚಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಸದರಿ ಯೋಜನಾ ಪ್ರದೇಶವು ಖಾಸಗಿ ಜಮೀನಾಗಿದ್ದು, ಉತ್ಪಾದಿತ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲಿರುವುದಾಗಿ ಮತ್ತು ಯೋಜನೆಯನ್ನು ಡಿಸೆಂಬರ್ 2015 ರೊಳಗಾಗಿ ಅನುಷ್ಠಾನಗೊಳಿಸಲಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ ಕಂಪನಿಯು ವರ್ಗಾವಣೆ ಶುಲ್ಕ ಮಾತ್ರ ಪಾವತಿಸಿದ್ದು ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಪಾವತಿಸಬೇಕಾಗಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 03–11–2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಯೋಜನೆಯನ್ನು ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು ತಪ್ಪಿದಲ್ಲಿ ಯೋಜನೆಯು ತಂತಾನೇ ರದ್ದಾಗುವುದೆಂಬ ಷರತ್ತಿಗೊಳಪಟ್ಟು ಹಂಚಿಕೆ ಸಮಿತಿಯು ಪ್ರಸ್ತಾವನೆಯನ್ನು ಶಿಫಾರಸ್ಸಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 244 ಎನ್‌ಸಿಇ 2012, ಬೆಂಗಳೂರು, ದಿನಾಂಕ: 08–05–2013**

ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯಲ್ಲಿ 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶದ ಕ್ರಮ ಸಂಖ್ಯೆ (3) ರಲ್ಲಿಯ ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಅರಳಿಕಟ್ಟೆ, ಒಂಟಮೂರಿ, ಜಾರ್ಕಿಹೊಳಿ, ರುಸ್ತುಂಪುರ ಮತ್ತು ಚಿಲಾಬಾವಿ ಗ್ರಾಮಗಳಲ್ಲಿ ಮಂಜೂರಾಗಿರುವ ಭಾಗಶಃ ಸಾಮರ್ಥ್ಯವಾದ 5.00 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಎಫಿಶಿಯನ್ಸಿ ಲಿಮಿಟೆಡ್ ರವರಿಗೆ **ವರ್ಗಾಯಿಸಲು** ಹಾಗೂ ಸದರಿ ಸಾಮರ್ಥ್ಯವನ್ನು **46.50 ಮೆ.ವ್ಯಾ.ಗೆ** ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಲು** ಅನುಮೋದನೆ ನೀಡಲಾಗಿದೆ.

| **Geographical Area Details of the Project** | **Sanctioned capacity in MW** | **Enhancement Proposed in MW** | **No. of WTGs & rating in KW** | **Total capacity including proposed enhancement in MW** |
|---|---|---|---|---|
| Identified potential place is of rolling terrain type with a mixture of forest and non-forest features. It consists of 10 peaks and spread across Arlikatti and Vantamuri villages. As per SOI map this area is also described as open scrub and dense scrub. The total area is covered in the following geographical co-ordinates:<br>**Latitude**: 16°4'16"- 16°7'9" N<br>**Longitude**: 74°34'7"- 74°39'34" E<br>**Ridge peaks:** 726, 761, 749, 764, 762, 737, 756, 760, 759 and 722m AMSL.,<br>**Toposheet** No: 47 L/12 | 5 | 41.50 | 31 Nos. x 1500 Kw | 46.50 |

1 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಎಫಿಶಿಯನ್ಸಿ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 ಅಭಿವೃದ್ಧಿದಾರರು ಸರ್ಕಾರದ ಆದೇಶನಾನುಸಾರ ಪಾವತಿಸಬೇಕಾದ ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಕ್ರೆಡಲ್ ಸಂಸ್ಥೆಗೆ ಒಡಂಬಡಿಕೆ ಮಾಡಿಕೊಳ್ಳುವ ಮುಂಚೆ ಪಾವತಿಸತಕ್ಕದ್ದು.

3 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಎಫಿಶಿಯನ್ಸಿ ಲಿಮಿಟೆಡ್** ರವರು ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಅನುಷ್ಠಾನಗೊಳಿಸುತ್ತಿರುವು–ದರಿಂದ ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.

4 ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಇಲ್ಲದಿದ್ದಲ್ಲಿ ಈ ಆದೇಶವು ತಂತಾನೇ ರದ್ದಾಗುವುದು

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ನಾಗೇಂದ್ರ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1006**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 40 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಡೆವಲಪ್‌ಮೆಂಟ್ ಲಿಮಿಟೆಡ್ ರವರಿಗೆ ವರ್ಗಾಯಿಸಿ, ಸದರಿ ಸಾಮರ್ಥ್ಯವನ್ನು 52.50 ಮೆ.ವ್ಯಾ.ಗೆ ಹೆಚ್ಚಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 164 ಎನ್‌ಸಿಇ 2002 ದಿನಾಂಕ: 05.03.2003.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GIWEDL-40 MW to 52.5 MW (Four EF-40 MW)/2012/2355 ದಿನಾಂಕ: 23/24.08.2012 ಮತ್ತು KRED/08/GIWEDL-40to52.5 MW/2012/2831 ದಿನಾಂಕ: 02/03.11.2012.

3) ದಿನಾಂಕ 21–09–2012 ಹಾಗೂ ದಿ.03.11.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಫೋರ್ ಎಎಫ್ ಪವರ್ ಪ್ರಾಜೆಕ್ಟ್ ಪ್ರೈ. ಲಿ., ರವರಿಗೆ ತುಮಕೂರು ಜಿಲ್ಲೆಯ ಮೈಲಕಬ್ಬೆ, ಬೋರನ ಕಣಿವೆ ಮತ್ತು ತಿಮ್ಮಾಪುರ ಎಂಬಲ್ಲಿ 40 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ತುಮಕೂರು ಜಿಲ್ಲೆಯ ಮೈಲಕಬ್ಬೆ, ಬೋರನ ಕಣಿವೆ ಮತ್ತು ತಿಮ್ಮಾಪುರ ಎಂಬಲ್ಲಿ ಹಂಚಿಕೆಯಾಗಿರುವ 40 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಡೆವಲಪ್‌ಮೆಂಟ್ ಲಿಮಿಟೆಡ್ ರವರಿಗೆ ವರ್ಗಾಯಿಸಿ ಸದರಿ ಸಾಮರ್ಥ್ಯವನ್ನು 52.50 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಸದರಿ ಯೋಜನಾ ಪ್ರದೇಶವು ಖಾಸಗಿ/ಕಂದಾಯ/ಅರಣ್ಯ ಜಮೀನಾಗಿದ್ದು, ಉತ್ಪಾದಿತ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ಮತ್ತು ಯೋಜನೆಯನ್ನು ಡಿಸೆಂಬರ್ 2015 ರೊಳಗಾಗಿ ಅನುಷ್ಠಾನಗೊಳಿಸಲಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ ಕಂಪನಿಯು ವರ್ಗಾವಣೆ ಶುಲ್ಕ ಮಾತ್ರ ಪಾವತಿಸಿದ್ದು, ಸಾಮರ್ಥ್ಯ ಹೆಚ್ಚಳ ಶುಲ್ಕ ಹಾಗೂ ಕಾಲಾವಕಾಶ ವಿಸ್ತರಣಾ ಶುಲ್ಕವನ್ನು ಪಾವತಿಸಬೇಕಾಗಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 03–11–2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಯೋಜನೆಯನ್ನು ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು ಹಾಗೂ ಈ ಅವಧಿಯಲ್ಲಿ ಯೋಜನೆಗೆ ಅರಣ್ಯ ಇಲಾಖೆಯಿಂದ ಅನುಮತಿಯನ್ನು ಪಡೆಯತಕ್ಕದ್ದು, ತಪ್ಪಿದಲ್ಲಿ ಯೋಜನೆಯು ತಂತಾನೇ ರದ್ದಾಗುವುದೆಂಬ ಷರತ್ತಿಗೊಳಪಟ್ಟು ಹಂಚಿಕೆ ಸಮಿತಿಯು ಪ್ರಸ್ತಾವನೆಯನ್ನು ಶಿಫಾರಸ್ಸಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 258 ಎನ್‌ಸಿಇ 2012, ಬೆಂಗಳೂರು, ದಿನಾಂಕ: 08–05–2013**

ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ತುಮಕೂರು ಜಿಲ್ಲೆಯ ಮೈಲಕಬ್ಬೆ, ಬೋರನ ಕಣಿವೆ ಮತ್ತು ತಿಮ್ಮಾಪುರ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 40.00 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಡೆವಲಪ್‌ಮೆಂಟ್ ಲಿಮಿಟೆಡ್ ರವರಿಗೆ ವರ್ಗಾಯಿಸಲು ಹಾಗೂ ಸದರಿ ಸಾಮರ್ಥ್ಯವನ್ನು 52.50 ಮೆ.ವ್ಯಾ.ಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಲು ಅನುಮೋದನೆ ನೀಡಲಾಗಿದೆ.**

| Geographical area Details of the Project | Location | Sanctioned capacity in MW | Enhancement Proposed in MW | No. of WTGs & rating in KW | Total capacity including proposed enhancement in MW |
|---|---|---|---|---|---|
| East of Mailakabbe with peaks 1009, 1010, 914M elevation covered in<br>**Latitude**:13°32'30"- 13°37'30" N<br>**Longitude**: 76°41'0"- 76°43'0" E | Mailakabbe | 20 | 10 | 20 Nos. x 1500 Kw | 30 |
| South of Boranakanave with peaks 865M elevation covered in<br>**Latitude**:13°34'30"- 13°37'30" N<br>**Longitude**: 76°37'30"- 76°39'0" E | Boran-kavanave | 7 | (-)1 | 4 Nos. x 1500 | 6 |
| South-West of Thimmapura with peaks 901M elevation covered in<br>**Latitude**:13°30'0"- 13°33'0" N<br>**Longitude**: 76°38'0"- 76°39'0" E | Thimmapura | 13 | 3.5 | 11 Nos. x 1500 | 16.5 |
| | **TOTAL** | **40** | **12.5** | **35 Nos x 1500** | **52.5** |

1 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಡೆವಲಪ್‌ಮೆಂಟ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 ಅಭಿವೃದ್ಧಿದಾರರು ಸರ್ಕಾರದ ಆದೇಶನಾನುಸಾರ ಪಾವತಿಸಬೇಕಾದ ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಕ್ರೆಡಲ್ ಸಂಸ್ಥೆಗೆ ಒಡಂಬಡಿಕೆ ಮಾಡಿಕೊಳ್ಳುವ ಮುಂಚೆ ಪಾವತಿಸತಕ್ಕದ್ದು.

3 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಡೆವಲಪ್‌ಮೆಂಟ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಸರಬರಾಜು ಮಾಡಲು ಬೆಸ್ಕಾಂನೊಡನೆ ಪಿಪಿಎ ಮಾಡಿಕೊಳ್ಳತಕ್ಕದ್ದು.

4 ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಹಾಗೂ ಈ ಅವಧಿಯೊಳಗೆ ಸದರಿ ಯೋಜನೆಗೆ ಅರಣ್ಯ ಇಲಾಖೆಯಿಂದ ಅನುಮತಿಯನ್ನು ಪಡೆಯತಕ್ಕದ್ದು. ಇಲ್ಲದಿದ್ದಲ್ಲಿ ಈ ಆದೇಶವು ತಂತಾನೇ ರದ್ದಾಗುವುದು

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ನಾಗೇಂದ್ರ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1011**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಫೋರ್ ಇಎಫ್ ವಿಂಡ್ ಪವರ್ ಪ್ರೈ. ಲಿ., ರವರಿಗೆ ಹಂಚಿಕೆಯಾಗಿರುವ 3.6 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯದಿಂದ 3.6 ಮೆ.ವ್ಯಾ.ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಕ್ರಿಯೇಷನ್ ಲಿ. ರವರಿಗೆ ವರ್ಗಾಯಿಸಿ, ಸದರಿ ಸಾಮರ್ಥ್ಯವನ್ನು 15.00 ಮೆ.ವ್ಯಾ.ಗೆ ಹೆಚ್ಚಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಎನ್‌ಸಿಇ 2006 ದಿನಾಂಕ: 16.10.2006.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GIWECLL-3.6 MW to 15 MW (Four EF-3.6 MW)/2012/2218 ದಿನಾಂಕ: 31.07/08.08.2012 ಮತ್ತು KRED/08/GIWECL-3.6to15 MW/2012/2807 ದಿನಾಂಕ: 31.10/02.11.2012.

3) ದಿನಾಂಕ 21.09.2012 ಹಾಗೂ ದಿ. 03.11.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈ. ಲಿ., ರವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ವಿವಿಧ ಪ್ರದೇಶಗಳ 3.6 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಜಿಲ್ಲೆಯ ತಿರುಮಲಾಪುರ, ತೊಡ್ರನಹಾಲು, ಅಲಸಿನಕೆರೆಹಟ್ಟಿ ಮತ್ತು ಮಟುಕರಹಟ್ಟಿ ಇಲ್ಲಿ ಹಂಚಿಕೆಯಾಗಿರುವ 3.6 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಕ್ರಿಯೇಷನ್ ಲಿ. ರವರಿಗೆ ವರ್ಗಾಯಿಸಿ ಸದರಿ ಸಾಮರ್ಥ್ಯವನ್ನು 15.00 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಸದರಿ ಯೋಜನಾ ಪ್ರದೇಶವು ಖಾಸಗಿ/ಕಂದಾಯ ಜಮೀನಾಗಿದ್ದು, ಉತ್ಪಾದಿತ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ಮತ್ತು ಯೋಜನೆಯನ್ನು ಡಿಸೆಂಬರ್ 2015 ರೊಳಗಾಗಿ ಅನುಷ್ಠಾನಗೊಳಿಸಲಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ ಕಂಪನಿಯು ವರ್ಗಾವಣೆ ಶುಲ್ಕ ಮಾತ್ರ ಪಾವತಿಸಿದ್ದು, ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಪಾವತಿಸಬೇಕಾಗಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 03–11–2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಯೋಜನೆಯನ್ನು ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು ತಪ್ಪಿದಲ್ಲಿ ಯೋಜನೆಯು ತಂತಾನೇ ರದ್ದಾಗುವುದೆಂಬ ಷರತ್ತಿಗೊಳಪಟ್ಟು ಹಂಚಿಕೆ ಸಮಿತಿಯು ಪ್ರಸ್ತಾವನೆಯನ್ನು ಶಿಫಾರಸ್ಸಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 245 ಎನ್‌ಸಿಇ 2012, ಬೆಂಗಳೂರು, ದಿನಾಂಕ: 08–05–2013**

ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಜಿಲ್ಲೆಯ ತಿರುಮಲಾಪುರ, ತೊಡ್ರನಹಾಳು, ಅಲಸಿನಕೆರೆಹಟ್ಟಿ ಮತ್ತು ಮಟುಕರಹಟ್ಟಿ ರಲ್ಲಿ ಹಂಚಿಕೆಯಾಗಿರುವ 3.6 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಕ್ರಿಯೇಷನ್ ಲಿ. ರವರಿಗೆ ವರ್ಗಾಯಿಸಲು ಹಾಗು ಸದರಿ ಸಾಮರ್ಥ್ಯವನ್ನು 15.00 ಮೆ.ವ್ಯಾ.ಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಲು** ಅನುಮೋದನೆ ನೀಡಲಾಗಿದೆ.

| Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW | Total capacity including proposed enhancement in MW |
|---|---|---|---|---|
| The Identified area is a non-forest land as per SOI map. Further, it consists of independent hillocks and are mostly oriented in NW-SE direction. This area has two peaks and are locted on the North-East of Todranahalu village. The proposed area is covered in the following geographical co-ordinates:<br>**Latitude**: 14°8'0"- 14°9'43" N<br>**Longitude**: 76°16'16"- 76°17'46" E<br>**Ridge peaks:** 835, 825m AMSL.,<br>**Toposheet** No: 57 B/8 | 3.6 | 11.4 | 10 Nos. x 1500 Kw | 15 |

1 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಕ್ರಿಯೇಷನ್ ಲಿ.** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 ಅಭಿವೃದ್ಧಿದಾರರು ಸರ್ಕಾರದ ಆದೇಶನಾನುಸಾರ ಪಾವತಿಸಬೇಕಾದ ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಕ್ರೆಡಲ್ ಸಂಸ್ಥೆಗೆ ಒಡಂಬಡಿಕೆ ಮಾಡಿಕೊಳ್ಳುವ ಮುಂಚೆ ಪಾವತಿಸತಕ್ಕದ್ದು.

3 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಎನರ್ಜಿ ಕ್ರಿಯೇಷನ್ ಲಿ.** ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.

4 ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಇಲ್ಲದಿದ್ದಲ್ಲಿ ಈ ಆದೇಶವು ತಂತಾನೇ ರದ್ದಾಗುವುದು.

5 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ನಾಗೇಂದ್ರ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1009**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 17.00 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯದಿಂದ 8.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನೋ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ ವರ್ಗಾಯಿಸಿ, ಸದರಿ ಸಾಮರ್ಥ್ಯವನ್ನು 64.5 ಮೆ.ವ್ಯಾ.ಗೆ ಹೆಚ್ಚಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಎನ್‌ಸಿಇ 2006 ದಿನಾಂಕ: 16.10.2006.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: KRED/08/GIWTSL-8to64.5 MW (Four EF-17 MW)2012/2032 ದಿನಾಂಕ: 21/24.07.2012 ಮತ್ತು KRED/08/GIWTSL-8to64.5 MW/2012/2809 ದಿನಾಂಕ: 31.10/02.11.2012.

3) ದಿನಾಂಕ 21.09.2012 ಹಾಗೂ ದಿ. 03.11.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು

ಮೇಲೆ ಓದಲಾದ (2)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಮಂಜೂರಾಗಿರುವ 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶದ ಕ್ರಮ ಸಂಖ್ಯೆ (2) ರಲ್ಲಿಯ ಚಿತ್ರದುರ್ಗ ಜಿಲ್ಲೆ ದಿಬ್ಬದಹಟ್ಟಿ, ಸುಲ್ತಾನಿಪುರ, ಬಿದರಕೆರೆ, ಹುಲ್ಲೇಹಾಳ ನೆಲ್ಲಿಕಟ್ಟೆ ಮತ್ತು ಅಜಪ್ಪನಹಳ್ಳಿ ಗ್ರಾಮಗಳಲ್ಲಿನ ಭಾಗಶಃ ಸಾಮರ್ಥ್ಯವಾದ 8.00 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನೋ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ ವರ್ಗಾಯಿಸಿ ಸದರಿ ಸಾಮರ್ಥ್ಯವನ್ನು 64.5 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು

ಸಲ್ಲಿಸಿರುತ್ತಾರೆ ಹಾಗೂ ಯೋಜನಾ ಪ್ರದೇಶವು ಖಾಸಗಿ/ಕಂದಾಯ ಜಮೀನಾಗಿದ್ದು, ಉತ್ಪಾದಿತ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ಯೋಜನೆಯನ್ನು ಡಿಸೆಂಬರ್ 2015 ರೊಳಗಾಗಿ ಅನುಷ್ಠಾನಗೊಳಿಸಲಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ ಕಂಪನಿಯು ವರ್ಗಾವಣೆ ಶುಲ್ಕ ಮಾತ್ರ ಪಾವತಿಸಿದ್ದು ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಪಾವತಿಸಬೇಕಾಗಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಯೋಜನೆಯನ್ನು ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು, ತಪ್ಪಿದಲ್ಲಿ ಯೋಜನೆಯು ತಂತಾನೇ ರದ್ದಾಗುವುದೆಂಬ ಷರತ್ತಿಗೊಳಪಟ್ಟು ಹಂಚಿಕೆ ಸಮಿತಿಯು ಪ್ರಸ್ತಾವನೆಯನ್ನು ಶಿಫಾರಸ್ಸಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 234 ಎನ್‌ಸಿಇ 2012, ಬೆಂಗಳೂರು, ದಿನಾಂಕ: 08–05–2013**

ಮೆ : ಫೋರ್ ಇಎಫ್ ವಿಂಡ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಹಂಚಿಕೆಯಾಗಿರುವ 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶದ ಕ್ರಮ ಸಂಖ್ಯೆ (2) ರಲ್ಲಿಯ ಚಿತ್ರದುರ್ಗ ಜಿಲ್ಲೆ ದಿಬ್ಬದಹಟ್ಟಿ, ಸುಲ್ತಾನಿಪುರ, ಬಿದರಕೆರೆ, ಹುಲ್ಲೇಹಾಳ ನೆಲ್ಲಿಕಟ್ಟೆ ಮತ್ತು ಅಜ್ಜಪ್ಪನಹಳ್ಳಿ ಗ್ರಾಮಗಳಲ್ಲಿನ ಭಾಗಶಃ ಸಾಮರ್ಥ್ಯವಾದ 8.00 ಮೆ.ವ್ಯಾ ಸಾಮರ್ಥ್ಯವನ್ನು **ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನೋ ಸಲ್ಯೂಷನ್ಸ್ ಲಿಮಿಟೆಡ್** ರವರಿಗೆ **ವರ್ಗಾಯಿಸಲು ಹಾಗೂ** ಸದರಿ **ಸಾಮರ್ಥ್ಯವನ್ನು 64.5 ಮೆ.ವ್ಯಾ.ಗೆ** ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಲು** ಅನುಮೋದನೆ ನೀಡಲಾಗಿದೆ.

| Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW | Total capacity including proposed enhancement in MW |
|---|---|---|---|---|
| Potential area is of high plains with an average elevation of about 700m. It is spread in North-South direction and held in-between the villages Dibbadahatti and Sultanipura. Further, it is surrounded by Didarakere, Hullehal, Nellikatte and Ajjappanahalli villages. And it is a non-forest area. The total area is covered in the following Geographical co-ordinates :-<br>**Latitude**: 14°21'48"- 14°26'3" N<br>**Longitude**: 76°15'0"- 76°18'11" E<br>**Ridge peaks: 723, 690, 707, 706, 688 and 722**m AMSL., Toposheet No: 57 B/7 | 8 | 56.50 | 43 Nos. x 1500 Kw | 64.50 |

1 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನೋ ಸಲ್ಯೂಷನ್ಸ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನೋ ಸಲ್ಯೂಷನ್ಸ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.

3 ಅಭಿವೃದ್ಧಿದಾರರು ಸರ್ಕಾರದ ಆದೇಶನಾನುಸಾರ ಪಾವತಿಸಬೇಕಾದ ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಕ್ರೆಡಲ್ ಸಂಸ್ಥೆಗೆ ಒಡಂಬಡಿಕೆ ಮಾಡಿಕೊಳ್ಳುವ ಮುಂಚೆ ಪಾವತಿಸತಕ್ಕದ್ದು.

4 ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಇಲ್ಲದಿದ್ದಲ್ಲಿ ಈ ಆದೇಶವು ತಾಂತಾನೇ ರದ್ದಾಗುವುದು.

5 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ನಾಗೇಂದ್ರ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1007**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 17.00 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯದಿಂದ 2.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಪವರ್ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ ವರ್ಗಾಯಿಸಿ, ಸದರಿ ಸಾಮರ್ಥ್ಯವನ್ನು 28.50 ಮೆ.ವ್ಯಾ.ಗೆ ಹೆಚ್ಚಿಸುವ ಕುರಿತು

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಎನ್‌ಸಿಇ 2006 ದಿನಾಂಕ: 16.10.2006.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: KRED/08/GIWPSL-2to28.50 MW (Four EF-17 MW)2012/2034 ದಿನಾಂಕ: 21/24.07.2012 ಮತ್ತು KRED/08/GIWPSL-2to28.5 MW/2012/2808 ದಿನಾಂಕ: 31.10/02.11.2012.

3) ದಿನಾಂಕ 21.09.2012 ಹಾಗೂ ದಿ.03.11.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಫೋರ್ ಎಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಮಂಜೂರಾಗಿರುವ ಒಟ್ಟು 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶದ ಕ್ರಮ ಸಂಖ್ಯೆ (1) ರಲ್ಲಿಯ ಚಿತ್ರದುರ್ಗ ಜಿಲ್ಲೆ ಶಿವನಕೆರೆ, ಕಲಹಾಳು, ಹೆಗ್ಗೇರೆ ಮತ್ತು ಚಿಕ್ಕಬೆನ್ನೂರು ಗ್ರಾಮಗಳಲ್ಲಿ ಮಂಜೂರಾಗಿರುವ ಭಾಗಶಃ ಸಾಮರ್ಥ್ಯವಾದ 2.00 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಪವರ್ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ ವರ್ಗಾಯಿಸಿ ಸದರಿ ಸಾಮರ್ಥ್ಯವನ್ನು 28.50 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಸದರಿ ಯೋಜನಾ ಪ್ರದೇಶವು ಖಾಸಗಿ/ಕಂದಾಯ ಜಮೀನಾಗಿದ್ದು, ಉತ್ಪಾದಿತ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ಮತ್ತು ಯೋಜನೆಯನ್ನು ಡಿಸೆಂಬರ್ 2015 ರೊಳಗಾಗಿ ಅನುಷ್ಠಾನಗೊಳಿಸಲಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ ಕಂಪನಿಯು ವರ್ಗಾವಣೆ ಶುಲ್ಕ ಮಾತ್ರ ಪಾವತಿಸಿದ್ದು, ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಪಾವತಿಸಬೇಕಾಗಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 03–11–2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಯೋಜನೆಯನ್ನು ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು ತಪ್ಪಿದಲ್ಲಿ ಯೋಜನೆಯು ತಂತಾನೇ ರದ್ದಾಗುವುದೆಂಬ ಷರತ್ತಿಗೊಳಪಟ್ಟು ಹಂಚಿಕೆ ಸಮಿತಿಯು ಪ್ರಸ್ತಾವನೆಯನ್ನು ಶಿಫಾರಸ್ಸಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 235 ಎನ್‌ಸಿಇ 2012, ಬೆಂಗಳೂರು, ದಿನಾಂಕ: 08–05–2013**

ಮೆ : ಫೋರ್ ಇಎಫ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಮಂಜೂರಾಗಿರುವ 17.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶದ ಕ್ರಮ ಸಂಖ್ಯೆ (1) ರಲ್ಲಿಯ ಚಿತ್ರದುರ್ಗ ಜಿಲ್ಲೆ ಶಿವನಕೆರೆ, ಕಲಹಾಳು, ಹೆಗ್ಗೇರೆ ಮತ್ತು ಚಿಕ್ಕಬೆನ್ನೂರು ಮಂಜೂರಾಗಿರುವ ಭಾಗಶಃ ಸಾಮರ್ಥ್ಯವಾದ 2.00 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಪವರ್ ಸಲ್ಯೂಷನ್ಸ್ ಲಿಮಿಟೆಡ್ ರವರಿಗೆ **ವರ್ಗಾಯಿಸಲು** ಹಾಗೂ ಸದರಿ ಸಾಮರ್ಥ್ಯವನ್ನು **28.50 ಮೆ.ವ್ಯಾಗೆ** ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಲು ಅನುಮೋದನೆ** ನೀಡಲಾಗಿದೆ.

| Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW | Total capacity including proposed enhancement in MW |
|---|---|---|---|---|
| The identified area is located on the South-East of Bharamasagara town and situated on the Right Hand side of NH4. It is a gentally elevated plain with an elevation of about 720m. The proposed area is covered in the following Geographical co-oridinates :-<br>**Latitude**: 14°19'8"- 14°21'21" N<br>**Longitude**: 76°13'5"- 76°15'0" E<br>**Ridge peaks:** 722, 718, and 712m AMSL., Toposheet No: 57 B/3 | 2 | 26.50 | 19 Nos. x 1500 Kw | 28.50 |

1 ಮೆ:: ಗ್ರೀನ್ ಇನ್ಫ್ರಾ ವಿಂಡ್ ಪವರ್ ಸಲ್ಯೂಷನ್ಸ್ ಲಿಮಿಟೆಡ್ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು

2 ಅಭಿವೃದ್ಧಿದಾರರು ಸರ್ಕಾರದ ಆದೇಶನಾನುಸಾರ ಪಾವತಿಸಬೇಕಾದ ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಕ್ರೆಡಲ್ ಸಂಸ್ಥೆಗೆ ಒಡಂಬಡಿಕೆ ಮಾಡಿಕೊಳ್ಳುವ ಮುಂಚೆ ಪಾವತಿಸತಕ್ಕದ್ದು.

3 **ಮೆ:: ಗ್ರೀನ್ ಇನ್ಫ್ರಾ ವಿಂಡ್ ಪವರ್ ಸಲ್ಯೂಷನ್ಸ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ

4 ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಇಲ್ಲದಿದ್ದಲ್ಲಿ ಈ ಆದೇಶವು ತಂತಾನೇ ರದ್ದಾಗುವುದು

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್.ನಾಗೇಂದ್ರ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1008**
**SC.25**

## INFRASTRUCTURE DEVELOPMENT SECRETARIAT

**Sub:** Ramanagara – Mysore Doubling Railway Line Project – Release of Funds reg.

**Read:**
1. G.O. No. IDD 1 NSW 2002 dated 22-11-2002.
2. G.O. No. IDD 1 NSW 2002 dated 22-03-2002.
3. G.O. No. IDD 1 NSW 2002 dated 19-02-2003.
4. G.O. No. IDD 47 NSW 2003 dated 12-09-2003.
5. G.O. No. IDD 47 NSW 2003 dated 22-01-2004.
6. G.O. No. IDD 47 NSW 2003(P) dated 26-03-2004.
7. G.O. No. IDD 51 NSW 2004 dated 19-07-2004.
8. G.O. No. IDD 63 IDM 2005 dated 25-05-2005.
9. G.O. No. IDD 66 NSW 2005 dated 15-12-2005.
10. G.O. No. IDD 68 NSW 2003 dated 30-08-2006.
11. G.O. No. IDD 68 NSW 2003 dated 23-07-2007.
12. G.O. No. IDD 101 NSW 2007 dated 25-04-2008.
13. G.O. No. IDD 101 NSW 2007 dated 25-10-2008.
14. G.O. No. IDD 101 NSW 07 dated 04-03-2009.
15. G.O. No. IDD 101 NSW 07 dated 28-03-2009.
16. G.O. No. IDD 101 NSW 07 dated 31-03-2009.
17. G.O. No. IDD 101 NSW 07 dated 18-12-2009.
18. G.O. No. IDD 101 NSW 07 dated 05-02-2010.
19. G.O. No. IDD 101 NSW 07 dated 26-06-2010.
20. G.O. NO. FD 143 BRS 2010, dated 29-11-2010.
21. G.O. No. IDD 101 NSW 07 dated 06-12-2010.
22. G.O. No. IDD 101 NSW 2007 dated 08-02-2012.
23. G.O. No. IDD 101 NSW 2007 dated 20-03-2012.
24. G.O. No. IDD 50 NSW 2012 dated 19-02-2012.
25. Letter No. W.63/ CN/ BNC/ MPIC & UC, dated 15-01-2013 received from the Chief Engineer, Construction/ West, South Western Railway, Bangalore.

**Preamble:**

In G.O.s read at Sl.No. (1) to (24) above, the Government of Karnataka has been released an amount of ₹. 326.99 crores towards its share for Bangalore-Mysore Railway Doubling Railway line Project.

2. In the letter read at Sl.No. (25) above, the Chief Engineer/Construction, South Western Railway, Bangalore, has reported that the anticipated expenditure during the current year i.e from 1-1-2013 to 31-3-2013 of Rs. 50.00 crores and Balance Outstanding from Government of Karnataka on the expenditure already incurred is Rs.22.46 crores and requested to arrange to deposit Rs. 54.13 crores with railways immediately towards Government of Karnataka share for the Ramanagara-Mysore Doubling Railway Line Project so as to ensure that the works, which are in good progress in various stretches are carried out as planned in the current financial year.

3. The cost of the project was ₹. 526.31 crores (inclusive of cost of electrification of ₹. 145.09 crores form Kengeri-Mysore). The revised estimate of ₹. 381.22 crores (GoK share is ₹. 254.14 crores and MoR share is ₹. 127.08 crores). The State Government has already released ₹. 251.34 crores particularly for construction of Ramanagara-Mysore Doubling Railway Line Project.

4. The proposal of South Western Railways, Bangalore has been examined in detail and hence this order.

**GOVERNMENT ORDER NO: IDD 50 NSW 2012, BANGALORE DATED 27-02-2013**

Under the circumstances explained in the preamble, the Government of Karnataka is pleased to release an amount of ₹. 2.80 crores (Rupees Two Crores Eighty lakhs only) being the balance portion of the Government of Karnataka share particularly for construction of Ramanagara – Mysore Doubling Railway Line Project to South Western Railways, Bangalore.

2. The expenditure shall be met under the Head of Account "5465-01-190-3-08 cost sharing for Ramanagara-Mysore Railway Doubling – other expenditure" out of the budget provision during 2012-13.

3. The Chief Executive Officer, K-RIDE, Bangalore is authorized to draw the amount on a payee's receipt duly countersigned by the Under Secretary to Government Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

4. Bangalore – Kengeri and Kengeri – Ramanagara Doubling Railway Line Project have already been completed and opened for traffic. Hence, the Financial Advisor and Chief Accounts Officer, South Western Railways, Bangalore shall close the accounts of these projects and furnish the report, Utilization Certificate along with photographs.

5. This order is issued in accordance with the financial powers delegated to Principal Secretaries / Secretaries to Government vide G.O. No. FD/04/TFP/2012, dated 27-04-2012 and No. FD 8 TFP 2012 dated 04-10-2012.

By Order and in the name of the Governor of Karnataka

**S.J. SAMPATH KUMAR,**

Under Secretary to Government,

**PR - 855** Infrastructure Development Department.

## INFRASTRUCTURE DEVELOPMENT SECRETARIAT

**Sub:** Construction of Bangalore – Hassan New Railway line – Release of funds – reg.

**Read:**
1. G.O. No. IDD 35 NSW 09, dated 24-04-2010.
2. G.O. No. IDD 30 NSW 09, dated 27-05-2011.
3. G.O. No. IDD 30 NSW 11, dated 21-03-2012.
4. G.O. No. IDD 30 NSW11, dated 28-06-2012.
5. Letter NO. W63/ CN/ BNC/ MPIC & UC Dated 08-11-2012, received from the Chief Engineer/ CON/ West/ BNC/SWR, Bangalore

**Preamble :**

In the G.O. read at (1) above, the Government has decided to take up the balance work of Bangalore-Hassan New Railway Project on 50:50 cost sharing basis between GOK & Ministry of Railways.

2. In the G.O. read at (2) to (4) above, Government of Karnataka has released Rs.97.50 crores towards the share of the State Government for Bangalore – Hassan New Railway Line Project.

3. In the letter read at (5) above, the Chief Engineer/ Construction/West, BNC/ South Western Railway, Bangalore, has requested to release Rs. 50.70 crores towards the share for the Construction of Bangalore – Hassan New Railway Line Project.

4. The proposal of South Western Railway has been examined in detail, hence this order.

**GOVERNMENT ORDER NO. IDD 30 NSW 2011, BANGALORE DATED: 05-03-2013**

Under the circumstances explained in the preamble, Government of Karnataka is pleased to release Rs. 20.00 crores (Rupees Twenty crores only) being the share of Government of Karnataka towards the construction of Bangalore – Hassan New Railway line.

2. The expenditure shall be met under the following Head of Accouants:-

| Sl. No. | Head of Account | Amount Released (Rs. In lakhs) |
|---|---|---|
| 1 | 5465-01-190-3-05-133 SDP | 1128.00 |
| 2 | 5465-01-190-3-05-211 New Cost Sharing Project investment | 200.00 |
| 3 | 5465-01-190-3-05-422- SCP | 189.00 |
| 4 | 5465-01-190-3-05-423- TSP | 483.00 |
| | **Total** | **2000.00** |

3. The Chief Administrative Officer & Financial Advisor & Chief Accounts Officer, South Western Railway, Bangalore shall furnish the physical progress in KM wise and Utilization Certificate along with photographs before seeking further release.

4. The Chief Executive Officer, K-RIDE, Bangalore is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore

5. This order is issued with the concurrence of Finance Department vide Note No. FD 1415 Exp-1/12 dated: 27-02-2013.

By Order and in the name of the Governor of Karnataka

**S.J. SAMPATH KUMAR,**

Under Secretary to Government,

Infrastructure Development Department.

**PR - 856**

## INFRASTRUCTURE DEVELOPMENT SECRETARIAT

**Sub:** Bagalkot – Kudachi New Broad-Gauge Railway line project – release of funds –reg.

**Read:**
1. G.O. No. IDD 35 NSW 09, dated 24-04-2010.
2. D.O. Letter No: 2000/PL/88/12, dated 28/29-06-2010 of The Executive Director / Perspective Planning, Ministry of Railway Board, New Delhi.
3. G.O. No. IDD 46 NSW 2010, dated 25-02-2011.
4. G.O. No. IDD 46 NSW 2010, dated:19-07-2012
5. Letter No: ಭೂಸ್ವಾ /ವಹಿ/ 8+9+10+11+12+13+14/ 2012-13, ದಿ: 29–11–2012, received from Assistant Commissioner, Chikkodi Sub-Division, Chikkodi.
6. Letter No: ಕಂಶಾ /ಭೂಸ್ವಾ/ ವಿವಾ–02 / 2012-13, ದಿ: 06–12–2012, of the Deputy Commissioner, Belgaum District addressed to the Principal Secretary, Revenue Department.
7. Letter No: H/CN/Survey/ land/2012, dated: 29-10-2012 received from the Deputy Chief Engineer, Con., SWR, Hubli.

**Preamble :**

In G.O read at (1) above, Government of Karnataka has accorded approval to take up Kudachi-Bagalkot New Railway line project on PPP basis.

2. In the letter read at (2) above, the Executive Director/ Perspective Planning, Ministry of Railways (Railways Board), New Delhi has stated that the project has been sanctioned in 2010-11 budget on cost sharing basis. In addition, Government of Karnataka agreed for providing of Land free of cost. Total cost of the project is Rs. 816.14 crore (Railway's share – 408.07GoK's share – 408.07) and total length of the project is 144.05 Km. Total land requirement for these projects is 782 acres and 34 guntas (316.82 hectares) in Bagalkot-Badami-Mudol in 20 villages. Ministry of Railways is taking this project in III Phases i.e. 0-0.58 km, 58 km-102km, 102km-142 km the project has been taken up on 50:50 cost sharing basis between Government of Karnataka & Ministry of Railways from 2011-12 onwards.

3. In G.O. read at Sl.No. (3) & (4) above, Government of Karnataka has released Rs. 21.25 crores to the Deputy Commissioner, Bagalkot District and Rs. 13.90 crores to the Deputy Commissioner, Belgaum District towards land acquisition cost of Bagalkot-Kudachi New Railway Line Project and Rs. 20.00 crores to South Western Railways towards the construction of Bagalkot – Kudachi New Railway Line Project.

4. In the letters read at Sl.No. (5) to (7), the Deputy Commissioenr, Belgaum District, Belgaum, the Deputy Chief Engineer, SWR, Hubli and the Assistant Commissioner, Chikkodi Sub-Division, Chikkodi has requested to release Rs. 15,56,31,960.00 for the cost of land acquisition.

5. The proposals has been examined in detail and hence this order.

**GOVERNMENT ORDER NO.IDD 46 NSW 2010, BANGALORE DATED :07-03-2013**

Under the circumstances explained in the preamble, Government of Karnataka is pleased to release Rs. 1556.32 lakhs (Rupees fifteen crores fifty six lakhs thirty two thousand only) to the Assistant Commissioner, Chikkodi Sub Division, Chikkodi towards acquisition of land for construction of Bagalkot-Kudachi New Railway Line Project.

2. This expenditure shall be met under the Head of Account "5465-01-190-3-05-133-Special Development Plan" out of the Budget during 2012-13.

3. The Assistant Commissioner, Chikkodi Sub-Division, Chikkodi is authorized to draw the amount at District Treasury, Belgaum. The Deputy Director, Treasury Network Management Centre (TNMC), Bangalore to upload the said amount to the Assistant Commissioner, Chikkodi Sub-Division, Chikkodi Account".

4. The Assistant Commissioner, Chikkodi Sub Division, Chikkodi shall furnish the Utilization Certificate and physical progress report along with photographs to the Government.

5. This order is issued with the concurrence of Finance Department vide. Note No. FD 195 Exp-1/2013, dated 27-02-2013.

By Order and in the name of the Governor of Karnataka

**S.J. SAMPATH KUMAR,**

Under Secretary to Government,

Infrastructure Development Department.

**PR - 857**

## INFRASTRUCTURE DEVELOPMENT SECRETARIAT

**Sub:** Munirabad – Mehaboobnagar New Broad Gauge Railway Line Project– Release of funds –reg.

**Read:**
1. G.O. No. IDD 13 NSW 2003, dated 11-09-2007.
2. G.O. No. IDD 1 NSW 2008, dated: 7/11-03-2008.
3. G.O. No. IDD 1 NSW 2008, dated: 22-09-2009.
4. G.O. No. IDD 1 NSW 2008, dated:23-08-2010.
5. G.O. No. IDD 1 NSW 2008, dated:09-02-2011.
6. G.O. No. IDD 1 NSW 2008, dated:23-05-2011.
7. Letter No. GN-RC/, dated: 12-02-2013 received from the Chief Engineer/Con./SWR/Hubli.
8. G.O. No. FD 301 BRS 2012, dated: 15-03-2013.

**Preamble:**

In the Government Order read at Sl.No. (1) above, administrative approval was accorded to take up Munirabad – Mehaboobnagar New Broad Gauge Railway Line Project on 50:50 cost sharing basis between Government of Karnataka and Ministry of Railways.

2. In the Government Orders read at Sl.No. (2) to (6) above, the Government of Karnataka has released Rs.55.00 crores towards the construction of Munirabad – Mehaboobnagar New Broad Gauge Railway Line Project.

3. In the letter read at (7) above, the Chief Engineer, South Western Railway, Hubli, has reported that all works are in good progress and requested to release Rs. 88.00 crores for the construction of Munirabad – Mehaboobnagar New Broad Gauge Railway Line Project.

4. In G.O. read at Sl.No. (8) above, sanction was accorded for re-appropriation of a sum of Rs. 3300.00 (Rupees Three Thousand and Three Hundred Lakhs only) under the Head of Account **"5465-01-190-3-10-Cost Sharing for Bidar Gulbarga New Railway Line Project (Plan) 133 SDP"** to the Head of Account **"5465-01-190-3-05-Cost Sharing for New Projects (Plan) – 211 Investment"** towards Munirabad –Mehaboobnagar New Broad Gauge Railway Line Project.

5. The proposal has been examined in detail and hence this order.

**GOVERNMENT ORDER NO. IDD 51 NSW 2012, BANGALORE DATED:22-03-2013**

Under the circumstances explained in the preamble, Government of Karnataka is pleased to release Rs. 33.00 crores (Rupees Thirty Three crores only) towards the share of Government of Karnataka for the construction of Munirabad – Mehaboobnagar New Broad Gauge Railway Line Project.

2. The expenditure shall be met under the Head of Account **"5465-01-190-3-05-Cost Sharing for New Projects (Plan) – 211 Investment" during 2012-13.**

3. The Chief Executive Officer, K.RIDE, Bangalore is authorized to draw the amount on a payee's receipt duly countersigned by the Under Secretary to Government, Infrastructure Development Department and K.-RIDE shall in turn deposit the same with the Financial Advisor and Chief Accounts Officer (Construction), South Western Railways, Bangalore.

4. The Financial Advisor and Chief Accounts Officer (Construction), South Western Railway, Bangalore shall furnish Utilization Certificate and the Chief Engineer (Construction), South Western Railways, Hubli shall furnish physical progress of the project in kilometer wise along with photographs.

5. This order is issued with the concurrence of Finance Department vide No. FD 302 Exp-1/2013, dated:15-03-2013.

By Order and in the name of the Governor of Karnataka

**S.J. SAMPATH KUMAR,**

Under Secretary to Government,

Infrastructure Development Department.

**PR - 861**

## ಇಂಧನ ಸಚಿವಾಲಯ

**ವಿಷಯ :** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ: 15-03-2005
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ: 04-09-2008
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 13 ಪಿಎಸ್‌ಆರ್ 2013, ದಿನಾಂಕ: 5-04-2013, 26-04-2013, 02-05-2013, 28-05-2013, 21-06-2013, 03-07-2013 ಮತ್ತು 29-07-2013

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ-1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ-2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತಿಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01-08-2008ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2013-14ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಲೆಕ್ಕಶೀರ್ಷಿಕೆ "2801-80-101-1-04-106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 4750.00 ಕೋಟಿಗಳನ್ನು ಒದಗಿಸಲಾಗಿದೆ. ಮೇಲಿನ ಕ್ರಮಾಂಕ 3ರಲ್ಲಿ ಓದಲಾದ ಆದೇಶಗಳಲ್ಲಿ ರೂ. 1700.00 ಕೋಟಿಗಳನ್ನು ಬಿಡುಗಡೆ ಮಾಡಿದೆ.
4. 2013-14ನೇ ಸಾಲಿನ ಆಗಸ್ಟ್ ಮಾಹೆಗೆ ರೂ. 175.00 ಕೋಟಿಗಳನ್ನು ಮತ್ತು ಸೆಪ್ಟೆಂಬರ್ ಮಾಹೆಗೆ ಮುಂಗಡವಾಗಿ ರೂ. 187.50 ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 13 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 28ನೇ ಆಗಸ್ಟ್, 2013**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ರೂ. 362.50 ಕೋಟಿಗಳ (ರೂ. ಮುನ್ನೂರು ಅರವತ್ತೆರಡು ಕೋಟಿ ಐವತ್ತು ಲಕ್ಷಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801-80-101-1-04-106 (ಸಹಾಯಧನ) (ಯೋಜನೇತರ) ಬಾಬ್ತು ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

**(ರೂ. ಕೋಟಿಗಳಲ್ಲಿ)**

| **ವಿದ್ಯುತ್ ಸರಬರಾಜು ಕಂಪನಿಗಳು** | **10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ** | **ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳಿಗೆ** | **2013-14ರ ಸೆಪ್ಟೆಂಬರ್ ಮಾಹೆಗೆ ಬಿಡುಗಡೆ** |
|---|---|---|---|
| ಬೆವಿಕಂ | 59.00 | 1.00 | **60.00** |
| ಮವಿಕಂ | 25.00 | 1.00 | **26.00** |
| ಹುವಿಕಂ | 132.50 | 3.00 | **135.50** |
| ಗುವಿಕಂ | 78.00 | 2.00 | **80.00** |
| ಚಾವಿಸನಿನಿ | 55.00 | 1.00 | **56.00** |
| ಹುಕ್ಕೇರಿ | 5.00 | 0.00 | **5.00** |
| **ಒಟ್ಟು** | **354.50** | **8.00** | **362.50** |

**ಮೇಲಿನ ಕೋಷ್ಟಕದಲ್ಲಿರುವಂತೆ ಆಗಸ್ಟ್ ಮತ್ತು ಸೆಪ್ಟೆಂಬರ್-2013ನೇ ಮಾಹೆಗಳಿಗೆ ಬಿಡುಗಡೆ ಮಾಡಿ ಆದೇಶಿಸಿರುವ ರೂ. 362.50 ಕೋಟಿಗಳನ್ನು ಈ ಕೆಳಕಂಡಂತೆ ಮರು ಹಂಚಿಕೆ ಮಾಡಿದೆ.**

(ರೂ. ಕೋಟಿಗಳಲ್ಲಿ)

| ವಿದ್ಯುತ್ ಸರಬರಾಜು ಕಂಪನಿಗಳು | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ | | | ವಿದ್ಯುತ್ ಸರಬರಾಜು ಕಂಪನಿಗಳಿಗೆ ನೇರ ಬಿಡುಗಡೆ |
|---|---|---|---|---|
| | ನೇರ ಬಿಡುಗಡೆ | ಹೊಂದಾಣಿಕೆಯ ಮೂಲಕ ಬಿಡುಗಡೆ | ಒಟ್ಟು ಮೊತ್ತ | |
| ಬೆವಿಕಂ | 60.00 | 10.00 (GUVNL) | 70.00 | |
| ಮವಿಕಂ | 16.00 | 0.00 | 16.00 | |
| ಹುವಿಕಂ | 65.00 | 0.00 | 65.00 | 55.50 |
| ಗುವಿಕಂ | 50.00 | 0.00 | 50.00 | 30.00 |
| ಚಾವಿಸನಿನಿ | 26.00 | 20.00 (JSWPTC) | 46.00 | 30.00 |
| **ಒಟ್ಟು** | **217.00** | **30.00** | **247.00** | **115.50** |

2. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 70.00 ಕೋಟಿಗಳಲ್ಲಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಹಂಚಿಕೆ ಮಾಡಿರುವ ರೂ. 60.00 ಕೋಟಿಗಳು ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL) ದ ವಿದ್ಯುತ್ ಖರೀದಿ ಬಾಕಿ ಬಾಬ್ತು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಸರಿಹೊಂದಿಸಿರುವ ರೂ. 10.00 ಕೋಟಿಗಳನ್ನು ಒಳಗೊಂಡಿರುತ್ತದೆ.

3. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡುಗಡೆ ಮೊತ್ತವಾದ ರೂ. 55.50 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ. 5.00 ಕೋಟಿಗಳೆಂದು ಲೆಕ್ಕೀಕರಿಸುವುದು.

4. ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗಳಿಂದ ತಲಾ ರೂ. 10.00 ಕೋಟಿಗಳನ್ನು ಜಿಂದಾಲ್ ಸ್ಟೀಲ್ ವರ್ಕ್ಸ್ ಪವರ್ ಟ್ರೇಡಿಂಗ್ ಕಂಪನಿ (JSWPTC) ಯ ವಿದ್ಯುತ್ ಖರೀದಿ ಬಾಬ್ತು ಹೊಂದಾಣಿಕೆ ಮೂಲಕ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಒದಗಿಸಿ, ಈ ಮೊತ್ತವನ್ನು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5. ಮೇಲಿನ ಎಲ್ಲಾ ಹೊಂದಾಣಿಕೆಗಳನ್ನು ಪರಿಗಣಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 247.00 ಕೋಟಿಗಳು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 55.50 ಕೋಟಿಗಳು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ. 30.00 ಕೋಟಿಗಳು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ರೂ. 30.00 ಕೋಟಿಗಳನ್ನು ಬಿಡುಗಡೆ ಮಾಡಿದೆ.

6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ (Utilization Certificate) ಸಲ್ಲಿಸತಕ್ಕದ್ದು.

7. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

8. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

9.10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

10. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 920 Exp-I 2013, ಬೆಂಗಳೂರು, ದಿನಾಂಕ: 27–08–2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**PR 956**

## ಇಂಧನ ಸಚಿವಾಲಯ

**ವಿಷಯ** : ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2013–14ರ ಹಣಕಾಸು ವರ್ಷದಲ್ಲಿ ದ್ವಿತೀಯ ತ್ರೈಮಾಸಿಕ ಅವಧಿಗೆ ಸಹಾಯಾನುದಾನದ ಹಣ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2013, ದಿನಾಂಕ: 29–04–2013
2. ಕವಿನಿ ಆಯೋಗದ ಪತ್ರ ಸಂಖ್ಯೆ ನಂ. ಎಫ್/13/ಎಫ/ಕೆಇಆರ್‌ಸಿ/577, ದಿನಾಂಕ: 03–07–2013

**ಪ್ರಸ್ತಾವನೆ :**

1. 2013–14ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಸಲುವಾಗಿ ರೂ. 300.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಇದರಲ್ಲಿ ಮೊದಲ ತ್ರೈಮಾಸಿಕಕ್ಕೆ ರೂ. 75.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಭರಿಸುವ ಸಲುವಾಗಿ 2013–14ನೇ ಸಾಲಿನ ದ್ವಿತೀಯ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 75.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 26ನೇ ಆಗಸ್ಟ್, 2013**

ಸರ್ಕಾರವು 2013–14ನೇ ಹಣಕಾಸು ವರ್ಷದ ದ್ವಿತೀಯ ತ್ರೈಮಾಸಿಕ ಅವಧಿಗೆ ಲೆಕ್ಕ ಶೀರ್ಷಿಕೆ "2801–80–101–1–07–101 ಸಹಾಯಾನುದಾನ (ಯೋಜನೇತರ)" ಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 75.00 ಲಕ್ಷ (ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು ``Payees Receipt'' ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2013, ದಿನಾಂಕ: 20–04–2013ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**PR 957**

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿವೀಕ್ಷಣಾ ಇಲಾಖೆಯ 6 ಅಧಿಕಾರಿಗಳ/ನೌಕರರ ವಿರುದ್ಧ ಮಾಡಿರುವ ಆಪಾದನೆಗಳನ್ನು ಕೈಬಿಡುವ ಬಗ್ಗೆ

**ಓದಲಾಗಿದೆ :** 1. ಕರ್ನಾಟಕ ಲೋಕಾಯುಕ್ತ ರವರ ಪತ್ರ ಸಂಖ್ಯೆ: ಲೋಕ್/ಎಸ್.ಪಿ–2/ಕಚೇರಿ ಶೋಧನೆ 2011, ದಿನಾಂಕ: 22–11–2011
2. ವಿದ್ಯುತ್ ಪರಿವೀಕ್ಷಣಾಲಯ ಕಚೇರಿಯ ಪತ್ರ ಸಂಖ್ಯೆ: ಮುವಿಪ/ಸಿಸ1/ಕ.ಶೋ/27856–57/11–12, ದಿನಾಂಕ: 05–12–2011
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಇಬಿಎಸ್ 2011, ದಿನಾಂಕ: 02–03–2012ರಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ರನ್ವಯ ನೀಡಲಾದ ನೋಟಿಸು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಆದೇಶದಂತೆ ಬೆಂಗಳೂರು ನಗರ ಜಿಲ್ಲೆಯಲ್ಲಿರುವ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಗ್ರಾಹಕರಿಂದ ಹಾಗೂ ಗುತ್ತಿಗೆದಾರರಿಂದ ಲಂಚದ ಹಣವನ್ನು ಒತ್ತಾಯಿಸಿ ಪಡೆದು ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳುತ್ತಿರುವ ಬಗ್ಗೆ ಬಂದ ಖಚಿತ ವರ್ತಮಾನದ ಮೇರೆಗೆ ಪೋಲಿಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ ನಗರ ವಿಭಾಗ, ಇವರು ತಮ್ಮ ಅಧೀನ ಅಧಿಕಾರಿಗಳ ನೇತೃತ್ವದಲ್ಲಿ ತಂಡಗಳನ್ನು ರಚಿಸಿ ದಿನಾಂಕ: 15–11–2011ರಂದು ಬೆಂಗಳೂರು ಪೂರ್ವ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಉತ್ತರ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ ಮತ್ತು ಬೆಂಗಳೂರು ದಕ್ಷಿಣ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿಯಲ್ಲಿ ಶೋಧನೆ ನಡೆಸಲಾಯಿತು. ಈ ದಾಳಿಗೆ ಸಂಬಂಧಪಟ್ಟಂತೆ ಎಲ್ಲಾ ದಾಖಲೆಗಳನ್ನು ಮುಖ್ಯ ವಿದ್ಯುತ್ ಪರಿವೀಕ್ಷಕರವರಿಗೆ ಕಳುಹಿಸಿದ್ದು, ಈ ಕೆಳಕಂಡ ಆರೋಪಿ ಅಧಿಕಾರಿಗಳ ಮೇಲೆ ಇಲಾಖಾ ವಿಚಾರಣೆ ನಡೆಸುವಂತೆ ತಿಳಿಸಿರುತ್ತಾರೆ.

1. ಶ್ರೀ ಎಂ.ಎಸ್. ಬಸವರಾಜು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಪೂರ್ವ ವಲಯ, ಬೆಂಗಳೂರು
2. ಶ್ರೀ ಎಸ್.ಜಿ. ಸಿದ್ದಬಸಪ್ಪ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಉತ್ತರ ವಲಯ, ಬೆಂಗಳೂರು
3. ಶ್ರೀ ಪಿ. ಜಯರಾಂ, ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಪಶ್ಚಿಮ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಉತ್ತರ ವಲಯ, ಬೆಂಗಳೂರು
4. ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ, ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಕೇಂದ್ರ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ ವಲಯ, ಬೆಂಗಳೂರು

5. ಶ್ರೀ ತಿತೀರಾ ಎನ್. ಅಪ್ಪಚ್ಚು, ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಅಧಿಕ ಪೂರ್ವ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ ವಲಯ, ಬೆಂಗಳೂರು

6. ಶ್ರೀ ಸತೀಶ್, ಎನ್. ಸಹಾಯಕ ವಿದ್ಯುತ್ ಪರಿವೀಕ್ಷಕರು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ ವಲಯ, ಬೆಂಗಳೂರು

ಉಲ್ಲೇಖಿತ ಸಂಖ್ಯೆ: (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಇವರು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಎಲ್ಲಾ ದಾಖಲಾತಿಗಳನ್ನು ಸರ್ಕಾರಕ್ಕೆ ಸೂಕ್ತ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ.

ಉಲ್ಲೇಖ (3)ರಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರನ್ವಯ ಮೇಲ್ಕಂಡ ಎಲ್ಲಾ ಅಧಿಕಾರಿಗಳಿಗೂ ನೋಟೀಸನ್ನು ಜಾರಿ ಮಾಡಿ ಲಿಖಿತ ರೂಪದಲ್ಲಿ ನಿಗದಿತ ಸಮಯದಲ್ಲಿ ಅವರ ಉತ್ತರವನ್ನು ನೀಡುವಂತೆ ಸೂಚಿಸಲಾಯಿತು. ಅದರಂತೆ ಎಲ್ಲಾ ಆರೋಪಿ ಅಧಿಕಾರಿಗಳು ಲಿಖಿತ ಉತ್ತರ ನೀಡಿ ತಮ್ಮ ಮೇಲಿನ ಆರೋಪವನ್ನು ನಿರಾಕರಿಸಿರುತ್ತಾರೆ.

ಕರ್ನಾಟಕ ಲೋಕಾಯುಕ್ತ ಪೊಲೀಸರು ನೀಡಿರುವ ಶೋಧನಾ ವರದಿ, ಆರೋಪಿ ಅಧಿಕಾರಿಗಳ ಮೇಲಿನ ಆಪಾದನೆಗಳು ಹಾಗೂ ಅವರು ನೀಡಿರುವ ಉತ್ತರವನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಮೇಲ್ಕಂಡ ಅಧಿಕಾರಿಗಳ ಮೇಲಿನ ದೋಷಾರೋಪಗಳಿಗೆ ಯಾವುದೇ ನಿರ್ದಿಷ್ಟ ಸಾಕ್ಷ್ಯಾಧಾರಗಳು ಕಂಡು ಬಂದಿರುವುದಿಲ್ಲ. ಸದರಿ ಅಧಿಕಾರಿಗಳ ವಿರುದ್ಧ ನಿರ್ದಿಷ್ಟವಾದ ಲಂಚದ ಆಪಾದನೆಯೂ ಸಹ ಇರುವುದಿಲ್ಲ. ಸದರಿ ಅಧಿಕಾರಿಗಳು ನೀಡಿರುವ ಉತ್ತರವು ಸಮಂಜಸವೆಂದು ಕಂಡು ಬಂದಿರುವ ಹಿನ್ನೆಲೆಯಲ್ಲಿ ಇವರ ವಿರುದ್ಧ ವಿಚಾರಣೆ ಮುಂದುವರೆಸುವ ಅವಶ್ಯಕತೆ ಇಲ್ಲದಿರುವುದನ್ನು ಮನಗೊಂಡು, ಇವರ ವಿರುದ್ಧದ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿದೆ.

ಅದರಂತೆ ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 142 ಇಬಿಎಸ್ 2011, ಬೆಂಗಳೂರು, ದಿನಾಂಕ : 9ನೇ ಜುಲೈ, 2012**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಈ ಕೆಳಕಂಡ ಅಧಿಕಾರಿಗಳ ಮತ್ತು ನೌಕರರ ವಿರುದ್ಧ ಹೊರಿಸಲಾದ ದೋಷಾರೋಪಣೆಗಳಿಗೆ ನೀಡಿರುವ ಉತ್ತರವು ಸಮಂಜಸವಾಗಿರುವ ಕಾರಣಗಳಿಂದ ಇವರ ವಿರುದ್ಧದ ದೋಷಾರೋಪಣೆಗಳನ್ನು ಕೈಬಿಟ್ಟು ವಿಚಾರಣೆಯನ್ನು ಮುಕ್ತಾಯ ಮಾಡಲಾಗಿದೆ.

1. ಶ್ರೀ ಎಂ.ಎಸ್. ಬಸವರಾಜು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಪೂರ್ವ ವಲಯ, ಬೆಂಗಳೂರು

2. ಶ್ರೀ ಎಸ್.ಜಿ. ಸಿದ್ದಬಸಪ್ಪ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಉತ್ತರ ವಲಯ, ಬೆಂಗಳೂರು

3. ಶ್ರೀ ಪಿ. ಜಯರಾಂ, ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಪಶ್ಚಿಮ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಉತ್ತರ ವಲಯ, ಬೆಂಗಳೂರು

4. ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ, ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಕೇಂದ್ರ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ ವಲಯ, ಬೆಂಗಳೂರು

5. ಶ್ರೀ ತಿತೀರಾ ಎನ್. ಅಪ್ಪಚ್ಚು, ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಅಧಿಕ ಪೂರ್ವ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ ವಲಯ, ಬೆಂಗಳೂರು

6. ಶ್ರೀ ಸತೀಶ್, ಎನ್. ಸಹಾಯಕ ವಿದ್ಯುತ್ ಪರಿವೀಕ್ಷಕರು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ಪೂರ್ವ ವಲಯ, ಬೆಂಗಳೂರು

ಈ ವಿಚಾರಣೆ ನಡೆಯದಿದ್ದಲ್ಲಿ, ಇವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅದನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**PR 958**
**SC - 25**

## ಇಂಧನ ಸಚಿವಾಲಯ

**ವಿಷಯ :** 2013–14ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2013, ದಿನಾಂಕ : 10–05–2013.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 15 ಪಿಎಸ್‌ಆರ್ 2013, ದಿನಾಂಕ : 24–05–2013.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 15 ಪಿಎಸ್‌ಆರ್ 2013, ದಿನಾಂಕ : 28–06–2013.
4. ಕವಿನಿನಿ ಪತ್ರ ಸಂಖ್ಯೆ : ಎ1 ಎಫ್3 ಬಿ2/11, ದಿನಾಂಕ : 11–09–2013.

**ಪ್ರಸ್ತಾವನೆ :**

1) ಜುಲೈ 2013ನೇ ತಿಂಗಳಿನಲ್ಲಿ ಮಂಡಿಸಿದ 2013–14ನೇ ಸಾಲಿನ ಪರಿಷ್ಕೃತ ಆಯವ್ಯಯ ಸವಿವರ ವೆಚ್ಚದ ಅಂದಾಜಿನಲ್ಲಿ ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಗೆ ಲೆಕ್ಕ ಶೀರ್ಷಿಕೆ 4801-01-190-0-09-211 Investment in Power Utility ಯಡಿ

ರೂ. 577.40 ಕೋಟಿಗಳನ್ನು ಒದಗಿಸಲಾಗಿದೆ. ಮೇಲಿನ ಕ್ರಮಾಂಕ 3ರಲ್ಲಿ ಓದಲಾದ ಆದೇಶದಲ್ಲಿ ರೂ. 175.00 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಿದೆ.

2) ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (Equity) ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 15 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 17–09–2013**

1. 2013–14ನೇ ಸಾಲಿಗೆ ಸರ್ಕಾರವು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 188.70 ಕೋಟಿಗಳನ್ನು (ರೂಪಾಯಿ ನೂರ ಎಂಭತ್ತೆಂಟು ಕೋಟಿ ಮತ್ತು ಎಪ್ಪತ್ತು ಲಕ್ಷಗಳು ಮಾತ್ರ) ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801–01–190–0–09–211 Investment in Power Utilities (ಯೋಜನೆ)" ಯಡಿ ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (Payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity) ವಾಗಿ ಬಳಸಿಕೊಂಡು, ಈ ಬಗ್ಗೆ ದೃಡೀಕರಣ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
4. ಮೇಲಿನ ಕ್ರಮಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–ಎ ರಲ್ಲಿ ಪದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4)ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಟ್ರಜರಿಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಇಎನ್ 15 ಪಿಎಸ್‌ಆರ್ 2013, ದಿನಾಂಕ : 24–05–2013 ರಲ್ಲಿ ವಿನಾಯಿತಿ ನೀಡಿದೆ.
5. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
6. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 1008 Exp-1/2013, ದಿನಾಂಕ : 16–09–2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR. 950**

## ಇಂಧನ ಸಚಿವಾಲಯ

**ವಿಷಯ :** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್ ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ : 15–03–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ : 04–09–2008.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 13 ಪಿಎಸ್‌ಆರ್ 2013, ದಿನಾಂಕ : 05–04–2013, 26–04–2013, 02–05–2013, 28–05–2013, 21–06–2013, 03–07–2013, 29–07–2013 ಮತ್ತು 28–08–2013.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ (ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು) ಮುಂದಿನ ಆದೇಶದವರೆಗೆ ದಿನಾಂಕ : 01–08–2008 ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2013–14ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 4750.00 ಕೋಟಿಗಳನ್ನು ಒದಗಿಸಲಾಗಿದೆ. ಮೇಲಿನ ಕ್ರಮಾಂಕ 3ರಲ್ಲಿ ಓದಲಾದ ಆದೇಶಗಳಲ್ಲಿ ರೂ. 2062.50 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಿದೆ.
4. 2013–14ನೇ ಸಾಲಿನ ಸೆಪ್ಟೆಂಬರ್ ಮಾಹೆಗೆ ರೂ. 187.50 ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 13 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 16–09–2013**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ರೂ. 187.50 ಕೋಟಿಗಳ (ರೂ. ಒಂದನೂರ ಎಂಭತ್ತೇಳು ಕೋಟಿ ಐವತ್ತು ಲಕ್ಷಗಳು ಮಾತ್ರ) ಸಹಾಯಧನವನ್ನು ಸೆಪ್ಟೆಂಬರ್ 2013ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 (ಸಹಾಯಧನ) (ಯೋಜನೇತರ) ಬಾಬ್ತು ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| **ವಿದ್ಯುತ್ ಸರಬರಾಜು ಕಂಪನಿಗಳು** | **10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ** | **ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳಿಗೆ** | **2013–14ರ ಸೆಪ್ಟೆಂಬರ್ ಮಾಹೆಗೆ ಬಿಡುಗಡೆ** |
|---|---|---|---|
| ಬೆವಿಕಂ | 30.00 | 1.00 | 31.00 |
| ಮವಿಕಂ | 13.00 | 0 | 13.00 |
| ಹುವಿಕಂ | 66.50 | 2.00 | 68.50 |
| ಗುವಿಕಂ | 37.00 | 1.00 | 38.00 |
| ಚಾವಿಸನಿನಿ | 28.00 | 1.00 | 29.00 |
| ಹುಕ್ಕೇರಿ | 7.00 | 1.00 | 8.00 |
| **ಒಟ್ಟು** | **181.50** | **6.00** | **187.50** |

ಮೇಲಿನ ಕೊಷ್ಠಕದಲ್ಲಿರುವಂತೆ ಸೆಪ್ಟೆಂಬರ್ 2013ನೇ ಮಾಹೆಗೆ ಬಿಡುಗಡೆ ಮಾಡಿ ಆದೇಶಿಸಿರುವ ರೂ. 187.50 ಕೋಟಿಗಳನ್ನು ಈ ಕೆಳಕಂಡಂತೆ ಮರು ಹಂಚಿಕೆ ಮಾಡಿದೆ.

(ರೂ. ಕೋಟಿಗಳಲ್ಲಿ)

| **ವಿದ್ಯುತ್ ಸರಬರಾಜು ಕಂಪನಿಗಳು** | **ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ** | **ವಿದ್ಯುತ್ ಸರಬರಾಜು ಕಂಪನಿಗಳಿಗೆ ನೇರ ಬಿಡುಗಡೆ** |
|---|---|---|
| | ನೇರ ಬಿಡುಗಡೆ | |
| ಬೆವಿಕಂ | 47.50 | |
| ಮವಿಕಂ | 8.00 | |
| ಹುವಿಕಂ | 50.00 | 10.00 |
| ಗುವಿಕಂ | 38.00 | |
| ಚಾವಿಸನಿನಿ | 29.00 | 5.00 |
| **ಒಟ್ಟು** | **172.50** | **15.00** |

2. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿರುವ ರೂ. 10.00 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ. 8.00 ಕೋಟಿಗಳೆಂದು ಲೆಕ್ಕೀಕರಿಸುವುದು.
3. ಮೇಲಿನ ಎಲ್ಲಾ ಹೊಂದಾಣಿಕೆಗಳನ್ನು ಪರಿಗಣಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 172.50 ಕೋಟಿಗಳು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 10.00 ಕೋಟಿಗಳು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ರೂ. 5.00 ಕೋಟಿಗಳನ್ನು ಬಿಡುಗಡೆ ಮಾಡಿದೆ.
4. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಸಹಾಯಧನದಲ್ಲಿ ರೂ. 16.50 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಗುಜರಾತ್ ಊರ್ಜಾ ವಿದ್ಯುತ್ ನಿಗಮ ನಿಯಮಿತದ ಬಾಬ್ತು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮತ್ತು ರೂ. 5.00 ಕೋಟಿಗಳನ್ನು ಮಂಗಳೂರು ವಿದ್ಯುತ್ ಕಂಪನಿಯ ಪರವಾಗಿ ಜಿಂದಾಲ್ ಸ್ಟೀಲ್ ವರ್ಕ್ಸ್ ಪವರ್ ಟ್ರೇಡಿಂಗ್ ಕಂಪನಿ (JSWPTC) ವಿದ್ಯುತ್ ಖರೀದಿ ಬಾಬ್ತು, ಚಾಮುಂಡೇಶ್ವರಿ ವಿದ್ಯುತ್ ನಿಗಮಕ್ಕೆ ಸರಿಹೊಂದಿಸಿ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವುದಾಗಿ ಲೆಕ್ಕೀಕರಿಸಲು ಆದೇಶಿಸಿದೆ.
5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
6. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

7. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
8. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
9. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 1008 Exp-1 2013, ಬೆಂಗಳೂರು, ದಿನಾಂಕ : 13–09–2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

PR. 951

ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ** : ಸ್ವ ವಿದ್ಯುತ್ ಉತ್ಪಾದನೆ ಮೇಲಿನ ಹೆಚ್ಚುವರಿ ತೆರಿಗೆ ಬಾಕಿಯ ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :** 1. ಪತ್ರ ಸಂಖ್ಯೆ : ಮುವಿಪ/ವಿಪ(ತೆ)–2/44286/12–13, ದಿನಾಂಕ : 21–03–2013.
2. ಆ.ಇ. ಟಿಪ್ಪಣಿ ಸಂಖ್ಯೆ : ಎಫ್‌ಡಿ 548 ವೆಚ್ಚ–1/2013, ದಿನಾಂಕ : 13–08–2013.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ (1)ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ಸ್ವ ವಿದ್ಯುತ್ ಉತ್ಪಾದನೆ ಮೇಲಿನ ಹೆಚ್ಚುವರಿ ತೆರಿಗೆ ಬಾಕಿಯನ್ನು ಮರುಪಾವತಿ ಮಾಡುವಂತೆ ಹಾಗೂ ಈ ಸಂಬಂಧ ಕೆಳಕಂಡ 2 ಸಂಸ್ಥೆಗಳು ಖಜಾನೆ ಪ್ರಮಾಣ ಪತ್ರವನ್ನು ಸಲ್ಲಿಸಿರುವುದರಿಂದ ವಿನಾಯಿತಿ ಅವಧಿಯಲ್ಲಿ ಪಾವತಿಸಿದ ತೆರಿಗೆ ಮೊತ್ತವಾದ ರೂ. 10,65,915.00 ಗಳನ್ನು ಹಿಂದಿರುಗಿಸುವಂತೆ ಕೋರಲಾಗಿತ್ತು.

| | | |
|---|---|---|
| ಅ) | ಮೆ : ಮೈ ಶುಗರ್ಸ್ ಕಂಪನಿ, ಮಂಡ್ಯ | ರೂ. 2,82,608.00 |
| ಆ) | ಮೆ: ಬನ್ನಾರಿ ಅಮ್ಮನ್ ಶುಗರ್ಸ್, ನಂಜನಗೂಡು | ರೂ. 7,83,306.00 |
| | **ಒಟ್ಟು** | **ರೂ. 10,65,914–00** |

ಮುಂದುವರೆದು, ಸದರಿ ವಿಷಯಕ್ಕೆ ಸಂಬಂಧಿಸಿದಂತೆ, ರೂ. 10,65,914.00ಗಳನ್ನು ಮರು ಪಾವತಿಸಲು ಹಣ ಬಿಡುಗಡೆ ಮಾಡುವಂತೆ ಆರ್ಥಿಕ ಇಲಾಖೆಯ ಅನುಮೋದನೆ ಕೋರಲಾಗಿತ್ತು.

2. ಮೇಲಿನ ಕ್ರಮಾಂಕ 2 ರಲ್ಲಿ ಆರ್ಥಿಕ ಇಲಾಖೆಯು ರೂ. 11.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 0043–00–101–0–90 Deduct Refunds ಯಡಿ ಹಿಂಪಾವತಿಸಲು ಸಹಮತಿಸಿದೆ.

3. 2013–14ನೇ ಸಾಲಿಗೆ ರೂ. 11.00 ಲಕ್ಷಗಳನ್ನು ವಿನಾಯಿತಿ ಅವಧಿಯಲ್ಲಿ ತೆರಿಗೆಯನ್ನು ಪಾವತಿಸಿದ ಸಂಸ್ಥೆಗಳಿಗೆ ಹಿಂಪಾವತಿ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 05 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 16–09–2013**

1. ಮೆ : ಮೈ ಶುಗರ್ಸ್ ಕಂಪನಿ, ಮಂಡ್ಯ ಮತ್ತು ಮೆ: ಬನ್ನಾರಿ ಅಮ್ಮನ್ ಶುಗರ್ಸ್, ನಂಜನಗೂಡುರವರ ಸ್ವ ವಿದ್ಯುತ್ ಉತ್ಪಾದನೆ ಮೇಲೆ ಪಾವತಿಸಿದ ಹೆಚ್ಚುವರಿ ತೆರಿಗೆ ಬಾಕಿಯನ್ನು ಅಥವಾ ವಿನಾಯಿತಿ ಅವಧಿಯಲ್ಲಿ ಪಾವತಿಸಿದ ತೆರಿಗೆಯ ಮೊತ್ತವನ್ನು ಹಿಂಪಾವತಿ ಮಾಡುವ ಸಲುವಾಗಿ ರೂ. 11.00 ಲಕ್ಷಗಳನ್ನು (ರೂ. ಹನ್ನೊಂದು ಲಕ್ಷಗಳು ಮಾತ್ರ) ಮುಖ್ಯ ವಿದ್ಯುತ್ ಪರಿವೀಕ್ಷಕರಿಗೆ ಮಂಜೂರು ಮಾಡಿ ಬಿಡುಗಡೆ ಮಾಡಿದೆ.
2. 2013–14ನೇ ಸಾಲಿನಲ್ಲಿ ಹಿಂಪಾವತಿಸುವ/ಮರುಪಾವತಿ ಮಾಡುವ ಮೊತ್ತವನ್ನು ಲೆಕ್ಕಶೀರ್ಷಿಕೆ 0043–00–101–0–90 Deduct Refunds ಯಡಿ ಲೆಕ್ಕೀಕರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 548 ವೆಚ್ಚ–1/2013, ದಿನಾಂಕ : 13–08–2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

PR. 952

ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ** : ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ : 31–05–2002.
2. ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2013, ದಿನಾಂಕ : 20–04–2013
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 7 ಪಿಎಸ್‌ಆರ್ 2013, ದಿನಾಂಕ : 10–05–2013, 03–07–2013 ಮತ್ತು 07–08–2013.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as you Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2013–14ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 500.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲಿ ರೂ. 208.00 ಕೋಟಿಗಳನ್ನು ಮೇಲಿನ ಉಲ್ಲೇಖ (4)ರಲ್ಲಿ ಬಿಡುಗಡೆ ಮಾಡಲಾಗಿದೆ.
4. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2013–14ನೇ ಸಾಲಿನ ಸೆಪ್ಟಂಬರ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 42.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 7 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 02–09–2013**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2013–14ನೇ ಸಾಲಿನ ಸೆಪ್ಟಂಬರ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ. 42.00 ಕೋಟಿ ನಲವತ್ತೆರಡು ಕೋಟಿ ರೂ.ಗಳನ್ನು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate) ನ್ನು ಸಲ್ಲಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2013, ಬೆಂಗಳೂರು, ದಿನಾಂಕ : 20–04–2013ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR. 953**

## ಇಂಧನ ಸಚಿವಾಲಯ

**ವಿಷಯ :** ವಿಫಲಗೊಂಡ ವಿತರಣಾ ಪರಿವರ್ತಕಗಳ ಶೀಘ್ರ ಬದಲಾವಣೆಗಾಗಿ ಉಪವಿಭಾಗ ಮಟ್ಟದಲ್ಲಿ "ಪರಿವರ್ತಕ ಬ್ಯಾಂಕ್" ಸ್ಥಾಪಿಸುವ ನೂತನ ಯೋಜನೆಯ ಬಗ್ಗೆ.

**ಓದಲಾಗಿದೆ :**

1. ರಾಜ್ಯ ಸರ್ಕಾರದ 2013–14ನೇ ಸಾಲಿನ ಆಯವ್ಯಯ.
2. ಸರ್ಕಾರದ ಸುತ್ತೋಲೆ ಸಂಖ್ಯೆ : ಇಎನ್ 1 ವಿಎಸ್‌ಸಿ 2013, ದಿನಾಂಕ : 19–06–2013.
3. ಸರ್ಕಾರದ ಪತ್ರ ಸಂಖ್ಯೆ : ಎನ್ 1 ವಿಎಸ್‌ಸಿ 2013, ದಿನಾಂಕ : 26–06–2013.

ಹಿನ್ನೆಲೆ :

1. ರಾಜ್ಯದಲ್ಲಿ ವಿದ್ಯುತ್ ವಿತರಣಾ ಪರಿವರ್ತಕಗಳ ವಿಫಲತೆಯು ಹೆಚ್ಚುತ್ತಿದ್ದು, ನಿಗದಿತ ಸಮಯದಲ್ಲಿ ಬದಲಾವಣೆಯಾಗದೇ, ವಿದ್ಯುತ್ ಸರಬರಾಜಿನಲ್ಲಿ ವ್ಯತ್ಯಯ ಉಂಟಾಗುತ್ತಿದ್ದು, ಘೋಷಿತ ಅವಧಿಯಂತೆ ಗ್ರಾಮೀಣ ಪ್ರದೇಶಗಳಲ್ಲಿ ವಿದ್ಯುತ್ ಸರಬರಾಜು ಮಾಡಲಾಗುತ್ತಿಲ್ಲವೆಂಬ ಅಂಶವನ್ನು ಗಮನಿಸಲಾಗಿದೆ.
2. ವಿದ್ಯುತ್ ಪರಿವರ್ತಕಗಳ ವಿಫಲತೆಯಿಂದ ಗ್ರಾಮೀಣ ಭಾಗದ ರೈತರಿಗೆ ಅನಾನುಕೂಲವಾಗುತ್ತಿದ್ದು, ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಪೂರೈಕೆಯಲ್ಲಿ ಅಡಚಣೆ ಉಂಟಾಗುತ್ತಿದೆ.
3. ವಿಫಲಗೊಂಡ ಪರಿವರ್ತಕಗಳು ದುರಸ್ತಿ ಕೇಂದ್ರಗಳಲ್ಲಿ ರಿಪೇರಿಗೊಳ್ಳುತ್ತಿರುತ್ತವೆ. ರಾಜ್ಯದಲ್ಲಿ ಮೇ–2013 ರವರೆಗೆ ಒಟ್ಟು 72 ಸಂಖ್ಯೆಯ ದುರಸ್ತಿ ಕೇಂದ್ರಗಳು ಸ್ಥಾಪಿತವಾಗಿದ್ದು, ಪ್ರತಿ ದುರಸ್ತಿ ಕೇಂದ್ರದ ಮಾಸಿಕ ದುರಸ್ತಿ ಪ್ರಮಾಣವು 50 ಪರಿವರ್ತಕಗಳಾಗಿದ್ದು, 72 ದುರಸ್ತಿ ಕೇಂದ್ರಗಳಿಂದ ದುರಸ್ತಿಗೊಳ್ಳುವ ಒಟ್ಟು ಪರಿವರ್ತಕಗಳ ಸಂಖ್ಯೆಯು 3600 ಆಗಿರುತ್ತದೆ.
4. ಆದರೆ ಪ್ರತಿ ತಿಂಗಳ ಸರಾಸರಿ ವಿತರಣಾ ಪರಿವರ್ತಕಗಳ ವಿಫಲತೆಯ ಒಟ್ಟಾರೆ ಸಂಖ್ಯೆಯು 5000 ಆಗಿರುವುದರಿಂದ, ವಿಫಲಗೊಂಡ ಎಲ್ಲಾ ಪರಿವರ್ತಕಗಳ ಬದಲಾವಣೆಯು ಸಕಾಲದಲ್ಲಿ ಸಾಧ್ಯವಾಗದೆ ವಿಳಂಬವಾಗುತ್ತಿದೆ. ಈ ಕಾರಣದಿಂದಾಗಿ, ಪ್ರತಿ ಉಪವಿಭಾಗ ಮಟ್ಟದಲ್ಲಿ ಪರಿವರ್ತಕ ಬ್ಯಾಂಕ್ ಸ್ಥಾಪಿಸಿ, ಅಗತ್ಯವಿರುವಷ್ಟು ಸಂಖ್ಯೆಯ ಪರಿವರ್ತಕಗಳ ದಾಸ್ತಾನು ಇಟ್ಟುಕೊಂಡು, ವಿಫಲವಾದ ಪರಿವರ್ತಕಗಳನ್ನು ಶೀಘ್ರವಾಗಿ ಬದಲಾಯಿಸಬೇಕೆಂದು ಮಾನ್ಯ ಮುಖ್ಯಮಂತ್ರಿಯವರು ದಿನಾಂಕ : 14–06–2013 ರಂದು ನಡೆದ ಇಂಧನ ಇಲಾಖೆಯ ಪರಿಶೀಲನಾ ಸಭೆಯಲ್ಲಿ ಸೂಚಿಸಿರುತ್ತಾರೆ ಹಾಗೂ ಈ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರು ಘನತೆವೆತ್ತ ರಾಜ್ಯಪಾಲರ ಭಾಷಣಕ್ಕೆ ವಂದನೆ ಸಲ್ಲಿಸುವ ಸದನದ ಚರ್ಚೆಯಲ್ಲಿಯೂ ಘೋಷಿಸಿರುತ್ತಾರೆ.
5. ಈ ವಿಷಯದ ಬಗ್ಗೆ ದಿನಾಂಕ : 17–08–2013ರಂದು ನಡೆದ ಇಂಧನ ಇಲಾಖೆಯ ಮಾಸಿಕ ವಿವಿಧ ಹಂತದ ಪರಿಶೀಲನಾ ಸಭೆಯಲ್ಲಿಯೂ ಚರ್ಚಿಸಲಾಗಿದೆ.
6. ವಿದ್ಯುತ್ ಸರಬರಾಜು ಕಂಪನಿಗಳು ತಮ್ಮ ಕಂಪನಿ ವ್ಯಾಪ್ತಿಯಲ್ಲಿನ ಉಪವಿಭಾಗ ಮಟ್ಟದಲ್ಲಿ ಪರಿವರ್ತಕ ಬ್ಯಾಂಕ್ ಸ್ಥಾಪಿಸಿ, ಅಗತ್ಯವಿರುವಷ್ಟು ಪರಿವರ್ತಕಗಳ ದಾಸ್ತಾನು ಇಟ್ಟುಕೊಂಡು ವಿಫಲವಾದ ಪರಿವರ್ತಕಗಳನ್ನು ನಿಗದಿತ ಅವಧಿಯೊಳಗೆ ಬದಲಾಯಿಸುವುದು ಮತ್ತು ಸಮರ್ಪಕ ವಿದ್ಯುತ್ ಸರಬರಾಜು ಮಾಡಬೇಕಾದ ಅವಶ್ಯಕತೆಯಿದೆ.
7. ಉಪವಿಭಾಗ ಮಟ್ಟದ ಪರಿವರ್ತಕ ಬ್ಯಾಂಕ್ ಸ್ಥಾಪನೆಗೆ, ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು ಸೇರಿ ಒಟ್ಟಾರೆ ರೂ. 88.83 ಕೋಟಿಗಳಷ್ಟು ಅಗತ್ಯವಿರುತ್ತದೆ.

ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 52 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 31–08–2013**

ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳು ತಮ್ಮ ಕಂಪನಿ ವ್ಯಾಪ್ತಿಯಲ್ಲಿನ ಉಪವಿಭಾಗ ಮಟ್ಟದಲ್ಲಿ ಅಗತ್ಯವಿರುವ ಪರಿವರ್ತಕ ಬ್ಯಾಂಕ್ ಸ್ಥಾಪಿಸಿ, ಅಗತ್ಯವಿರುವಷ್ಟು ಸಂಖ್ಯೆಯ ಪರಿವರ್ತಕಗಳ ದಾಸ್ತಾನು ಇಟ್ಟುಕೊಂಡು ವಿಫಲವಾದ ಪರಿವರ್ತಕಗಳನ್ನು ನಿಗದಿತ ಅವಧಿಯೊಳಗೆ ಬದಾಯಿಸಿ, ಸಮರ್ಪಕವಾಗಿ ವಿದ್ಯುತ್ ಸರಬರಾಜನ್ನು ಮಾಡಬೇಕೆಂದು ಆದೇಶಿಸಲಾಗಿದೆ.

ಪರಿವರ್ತಕ ಬ್ಯಾಂಕುಗಳ ಸ್ಥಾಪನೆಗೆ ಅಗತ್ಯವಿರುವ ಹಣಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳು ತಮ್ಮ ಸ್ವಂತ ಸಂಪನ್ಮೂಲಗಳನ್ನು ಬಳಸಿ ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

**PR. 954** ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕದಲ್ಲಿ ಬೆಳಕು ಯೋಜನೆಯನ್ನು ಅನುಷ್ಠಾನಗೊಳಿಸಲು ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 20 ಪಿಎಸ್‌ಆರ್ 2012, ದಿನಾಂಕ : 30–01–2013.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪತ್ರ ಸಂಖ್ಯೆ : ಕ್ರೆಡಲ್ : 07 : ಬೆಳಕು ಯೋಜನಾ : 1142, ದಿನಾಂಕ : 15–05–2013.

ಪ್ರಸ್ತಾವನೆ :

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಸರ್ಕಾರವು ಬಡತನದ ರೇಖೆಗಳಿಗಿಂತ ಕೆಳಗಿರುವ ಸಾಮಾನ್ಯ ವರ್ಗದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ನ್ಯಾಯ ಬೆಲೆ ಅಂಗಡಿಗಳ ಮೂಲಕ ಎರಡು (2) ಸಿಎಫ್‌ಎಲ್ ಲ್ಯಾಂಪ್‌ಗಳನ್ನು 10.50 ಲಕ್ಷ ಫಲಾನುಭವಿಗಳಿಗೆ 2012–13ನೇ ಸಾಲಿನಲ್ಲಿ ನೀಡಲು ಬೆಳಕು ಯೋಜನೆಗೆ ಅನುಮೋದನೆ ನೀಡಿದೆ.

2. ಬೆಳಕು ಯೋಜನೆಯ ಸಿಎಫ್‌ಎಲ್ ಲ್ಯಾಂಪ್‌ಗಳನ್ನು ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸಲು ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ಇಲಾಖೆ, ತಮ್ಮ ಪತ್ರ ಸಂಖ್ಯೆ : ಅನಾಸ 48 ಅನಾಸ 2012, ದಿನಾಂಕ : 21–12–2012ರಲ್ಲಿ ಸಹಮತಿಯನ್ನು ನೀಡಿರುತ್ತದೆ.
3. 2013–14ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2801–80–800–1–05–103" Grants-in-Aid-General ಬೆಳಕು ಯೋಜನೆಯಡಿ ರೂ. 10.00 ಕೋಟಿಗಳನ್ನು ಒದಗಿಸಿದೆ.
4. ಮೇಲೆ ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಪ್ರಸಕ್ತ ಸಾಲಿನಲ್ಲಿ ಸದರಿ ಯೋಜನೆಗೆ ಒದಗಿಸಲಾದ ಅನುದಾನ ಬಿಡುಗಡೆ ಕೋರಿ ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 17 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 28–08–2013**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಬೆಳಕು ಯೋಜನೆಯಡಿ 2 CFL ಲ್ಯಾಂಪುಗಳನ್ನು ಬಡತನ ರೇಖೆಗಿಂತ ಕೆಳಗಿರುವ ಸಾಮಾನ್ಯ ವರ್ಗದ/ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ಇಲಾಖೆಯ ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸಲು 2013–14ನೇ ಸಾಲಿಗೆ ರೂ. 10.00 ಕೋಟಿಗಳನ್ನು (ರೂ. ಹತ್ತು ಕೋಟಿಗಳನ್ನು) ಬಿಡುಗಡೆ ಮಾಡಿ ಆದೇಶಿಸಿದೆ.
2. ಈ ಮೊತ್ತವನ್ನು ಲೆಕ್ಕಶೀರ್ಷಿಕೆ "2801–80–800–1–05–103" Grants-in-Aid-General ಬೆಳಕು ಯೋಜನೆ ಸಹಾಯಾನುಧಾನ–ಸಾಮಾನ್ಯ ಇದರ ಅಡಿಯಲ್ಲಿ ಭರಿಸತಕ್ಕದ್ದು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate) ನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 630 Exp-1/2013, ದಿನಾಂಕ : 24–08–2013ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

PR. 955

ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆಯ ಗೋಕಾಕ್ ಮತ್ತು ರಾಮದುರ್ಗ ತಾಲ್ಲೂಕಿನ ಕೆಲವು ಗ್ರಾಮಗಳನ್ನು ಸ್ಥಳಾಂತರ ಪ್ರಕ್ರಿಯೆಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ:** ಬೆಳಗಾವಿ ಜಿಲ್ಲಾಧಿಕಾರಿಗಳ ಪತ್ರ ಸಂ: ಕಂಶಾ/ಭೂ.ಸ್ವಾ/ಮಿ/ವಿವ/265/09–10. ದಿನಾಂಕ: 01–12–2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಬೆಳಗಾವಿ ಜಿಲ್ಲಾಧಿಕಾರಿಗಳು ಗೋಕಾಕ್ ತಾಲ್ಲೂಕಿನ ಕಲಾರಕೊಪ್ಪ, ಮನಗುಪ್ಪಿ, ಹಡಗಿನಾಳ, ಉದಗಟ್ಟಿ, ಶಿಂಗಳಾಪುರ ಮತ್ತು ರಾಮದುರ್ಗ ತಾಲ್ಲೂಕಿನ ಕಿಲಬನೂರ ಗ್ರಾಮಗಳನ್ನು ನೆರೆ ಪೀಡಿತ ಗ್ರಾಮಗಳ ಸ್ಥಳಾಂತರಕ್ಕೆ ಸಂಬಂಧಿಸಿದ ಪಟ್ಟಿಯಿಂದ ಕೈಬಿಡುವಂತೆ ಹಾಗೂ ಸದರಿ ಗ್ರಾಮಗಳ ಸ್ಥಳಾಂತರಕ್ಕೆ ಸಂಬಂಧಿಸಿದಂತೆ, ಭೂ ಸ್ವಾಧೀನ ನಡವಳಿಯನ್ನು ಕೈ ಬಿಡುವಂತೆ ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 27 ಟಿಎನ್‌ಆರ್ 2012, ಬೆಂಗಳೂರು, ದಿನಾಂಕ: 06–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನ ಕಲಾರಕೊಪ್ಪ, ಮನಗುಪ್ಪಿ, ಹಡಗಿನಾಳ, ಉದಗಟ್ಟಿ, ಶಿಂಗಳಾಪುರ ಮತ್ತು ರಾಮದುರ್ಗ ತಾಲ್ಲೂಕಿನ ಕಿಲಬನೂರ ಗ್ರಾಮಗಳನ್ನು ನೆರೆ ಪೀಡಿತ ಗ್ರಾಮಗಳ ಸ್ಥಳಾಂತರಕ್ಕೆ ಸಂಬಂಧಿಸಿದ ಪಟ್ಟಿಯಿಂದ ಕೈಬಿಡಲಾಗಿದೆ. ಹಾಗೂ ಸದರಿ ಗ್ರಾಮಗಳ ಸ್ಥಳಾಂತರಕ್ಕೆ ಸಂಬಂಧಿಸಿದಂತೆ ಭೂ ಸ್ವಾಧೀನ ನಡವಳಿಯನ್ನು ಕೈಬಿಡಲು ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಎಂ. ಆನಂದಪ್ಪ**

PR.1078
SC.5

ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ವಿ. ನಿ. & ಸೇ–2)

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59